ಶ್ರೀಮಾನ್ ವ್ಹಿ. ಜಿ. ಬುರ್ಲಿಯವರು ಬರೆದ

( ಅಚ್ಚಿಗಾಗಿ ಸಿದ್ಧವಿರುವ )

# ಗ್ರಂಥಗಳು.

---

| | | | | | |
|---|---|---|---|---|---|
| ೧ | ಚಿತ್ರದುರ್ಗ. | .... | .... | .... | ನಾಟಕ. |
| ೨ | ಸೂರ್ಯಾಸ್ತ | .... | .... | .... | ,, |
| ೩ | ಸ್ವಾತಂತ್ರ ಸಿಂಹ. | .... | .... | .... | ,, |
| ೪ | ಕೆಚ್ಚೆದೆಯ ಕನ್ನಡಿಗ. | | .... | .... | ,, |
| ೫ | ಕರನಿರಾಕರಣೆ. | .... | .... | .... | ,, |
| ೬ | ಸತ್ಯಾಗ್ರಹ. | .... | .... | .... | ಕಾದಂಬರಿ. |
| ೭ | ಕನಕದಾಸ. | .... | .... | .... | ನಾಟಕ |
| ೮ | ಬಸವೇಶ್ವರ. | .... | .... | .... | ,, |
| ೯ | ಸಂಭ್ಹಿಲ್ಲಾ. | .... | .... | .... | ಪ್ರಹಸನ. |
| ೧೦ | ಮುರುಕು ವಿದ್ಯಾ ಹರಕು ಸಂಸಾರ(ಅಚ್ಚಾಗಿದೆ).... | | | | ,, |
| ೧೧ | ಹಳ್ಳೀ ಬೀಗ್ರು. | .... | .... | .... | ಕಥಾಸಂಗ್ರಹ |

---

ಕನ್ನಡ ವಾಙ್ಮಯ ಪ್ರಕಾಶನ ಸಮಿತಿ, ಬಾಗಿಲುಕೋಟೆ.
ಪ್ರಕಟನೆ ೧.



# ಮುರುಕು ವಿದ್ಯಾ - ಹರಕು ಸಂಸಾರ

(ಪ್ರಹಸನ)



ಲೇಖಕರು:—
ವಾಸುದೇವಾಚಾರ್ಯ ಬುರ್ಲಿ

ಪ್ರಥಮ ಮುದ್ರಣ ] ಅಕ್ಟೋಬರ [ ಬೆಲೆ ೦—೨—೦
೧೯೩೪.

# ಅರಿಕೆ.

ಕನ್ನಡ ವಾಙ್ಮಯ ವೃಕ್ಷವು ವೈಖರಿಯಿಂದ ಬೆಳೆಯುತ್ತಲಿದೆ. **ಕನ್ನಡಮ್ಮನ** ಪೂಜೆಗಾಗಿ, ವಿವಿಧ ಕಲಾಕುಸುಮಗಳು ಮಿರುಗುಗೊಂಡು ಅರಳುತ್ತಲಿವೆ. ಕರಿನಾಡ ಮೂಲೆ ಮೂಲೆಗಳಲ್ಲಿ ಸಾಹಿತ್ಯ ತಪೋನಿರತ ಅರ್ಚಕರು ಕಿರುಗತೆ, ಹಿರಿಗತೆ, ನಾಟ್ಯ, ನಾಟಕ, ಕಾವ್ಯ ಕಲೆಗಳ ಚಲುವಮಾಲೆಗಳನ್ನು, ಒಲ್ಮೆಯಿಂದ **ಕನ್ನಡಮ್ಮನ** ಕೊರಳಿಗಿಕ್ಕಿ ಸೇವೆಸಲ್ಲಿಸುತ್ತಲಿರುವರು.

ಕನ್ನಡ ವಾಙ್ಮಯ ಸಾಮ್ರಾಟರೆಂದು ಕೀರ್ತಿವೆತ್ತ ವೈ. ವಾ. **ಕೆರೂರ ವಾಸುದೇವಾಚಾರ್ಯರ** ನೈಜ ವಾಙ್ಮಯ ಸ್ಮರಣೆ " ಅಮ್ಮನಿಗೆ ಚಲುವಮಾಲೆಗಳನ್ನು ಅಣಿ ಮಾಡಿರಿ " ಎಂದು ಬಡಿದೆಬ್ಬಿಸಿ ಕೊನರಿಸಿದೆ ನಮ್ಮನ್ನು.

ಕುಂದ ಕುಟ್ಮಲಗಳು, ನುರಿತ ಅರ್ಚಕನು ಅರ್ಪಿಸಬೇಕಾದವು! ಅಳಿಲು ಸೇವೆ ಮಳಲಿನಿಂದ ಸಲ್ಲಿದಂತೆ, ಚೆಂಗಣಗಿಲುಗಳನ್ನಾದರೂ ಅರ್ಪಿಸಿ, ಅಮ್ಮನನ್ನು ಭಕುತಿಯಿಂದ ಪೂಜಿಸೋಣವೆಂದು ಸಮಿತಿಯ ಗೆಳೆಯರ ಹಿರಿಯಾಸೆ ಕಾಡು ಕುಸುಮಗಳನ್ನು ಮಮತೆಯಿಂದ ಕೈಎತ್ತಿ ತೆಗೆದುಕೊಂಡು, ಮಕ್ಕಳ ಮುಂದಿಟ್ಟು "ಪೋಷಿಸಿರಿ" ಎಂದು ನಲ್ವಾಣಿತಿಯ ನೀಯುವಳು ಅಮ್ಮಾ.

ಹೊಸ ಅರ್ಚಕರ ಬಳಗ ಸಮಿತಿಯ ಜತೆಗೂಡಿ ಒಂದೊಂದು ಮಾಲೆಯೊಡನೆ ದೇವಿಯ ಬಳಗೆ ಬರಲು ತವಕ ಪಡುತ್ತಲಿದೆ. ಅಮ್ಮನು ಆಶೀರ್ವದಿಸಿ ಜನತೆಯ ಪರಿಚಯಕ್ಕೆ, ಲಾಲನೆ, ಪೋಷಣೆಗೆ ಮೆಲ್ಲನೆ ಕಳುಹಿಸುವಳು.

ಸಮಿತಿಯವರ ಕೇಳಿಕೆಗೆ ಮನ್ನಣೆ ಇತ್ತು. "ಮುರುಕು ವಿದ್ಯಾಹರಕು ಸಂಸಾರ"ವನ್ನು ಪ್ರಚುರಿಸಲು ಕೊಟ್ಟಿದುದಕ್ಕಾಗಿ ಸಮಿತಿಯು ಗೆಳೆಯ **ಶ್ರೀ. ಬುರ್ಲಿಯವರಿಗೆ** ಉಪಕೃತವಾಗಿದೆ. ಬಹುವಿಧದಿಂದ ನೆರವಾಗಿ ಕಾಲಕ್ಕೆ ತಕ್ಕ ಸಲಹೆ ಕೊಟ್ಟ ಗೆಳೆಯರೆಲ್ಲರಿಗೂ ಸಮಿತಿಯು ಚಿರ ಋಣಿಯಾಗಿದೆ.

ಬಾಗಲಕೋಟ ಪ್ರೆಸ್ಸಿನವರು ಇದನ್ನು ಅಂದವಾಗಿ ಮುದ್ರಿಸಿ ಕೊಟ್ಟಿದ್ದಕ್ಕೆ ಅವರಿಗೆ ಆಭಾರಿಯಾಗಿದೆ.

ಕೊಂಡು ಓದುವ ವಾಚಕರಿಗೆ ನಮ್ಮ ಕೃತಜ್ಞತೆಗಳನ್ನು ಅರ್ಪಿಸಬೇಡವೆ?

ಬಾಗಿಲುಕೋಟೆ.
ವಿ. ಆ. ಶು. ೧೦
ಶಕೆ ೧೮೬೦

ತಮ್ಮ,
**ಕನ್ನಡ ವಾಙ್ಮಯ ಪ್ರಕಾಶನ ಸಮಿತಿ,**
ಬಾಗಿಲುಕೋಟೆ.



# ಲೇಖಕನ ವಿಜ್ಞಾಪನೆ.

ನಮ್ಮ ಸಮಾಜದ ತೆರೆಮರೆಯಲ್ಲಿ ಅವಿತುಕೊಂಡು ಅಣುಕಿಸುವ ಕೆಲ ನಡತೆಗಳು ನುಶಿಗಳಂತೆ ಮುಗಿಬಿದ್ದಿವೆ. ಪೊಳ್ಳು ಜೊಳ್ಳಾಗಿಸುತ್ತವೆ ಸಮಾಜವನ್ನು. ಅರಿತೂ ಅರಿಯದೆಯೂ ದರಿಕಂದರಗಳ ತಳಕಾಣಿ-ಸುವ ಹೊಂಚಿನಲ್ಲಿವೆ. ಬಡತನದ ಶಿಪುಡೇ ನಮ್ಮ ಸಮಾಜದ ಗಂಟು. ಸಿರಿತನದ ಸೋಗು ಮಾತ್ರ ಬೇರೂರಿದೆ.

ಧಾರ್ಮಿಕ ಭಾವನೆಯ ವಿಟಂಬನೆಯ ಹುಂಬಲವನ್ನೆಬ್ಬಿಸುವ ಕಾಲವಿದು. ಸನಾತನ ಸಂಪ್ರದಾಯಕ್ಕೆ ತಿಲಾಂಜಲಿ ಕೊಡಿಸುವ ಕಾಲವೂ ನಿಜ. ಇಂತಹ ಸಂದರ್ಭದಲ್ಲಿ ಆಚಾರ ವಿಚಾರಗಳ ತಾಕಲಾಟದ ಸಮಾರಂಭವನ್ನು, ಒಳನುಗ್ಗಿ ನೋಡಬೇಕೆನ್ನುವ ವಾಚಾಲುಗಳಂತೂ ಸಮಾರಂಭದ ಪ್ರಾಂಗಣದಲ್ಲಿ ಧರ್ಮವಂತರೆಂದು ಎದೆಯುಬ್ಬಿಸಿ ಕುಳಿತುಕೊಳ್ಳುತ್ತಾರೆ ಸರಿ.

ಒಂದೆಡೆ ಧರ್ಮ ಸಂಪ್ರದಾಯಗಳ ಅಬ್ಬರವನ್ನು ಸದೆಬಡೆಯುವ ಹೊಸ ಜನತೆಯ ಹುಯ್ಯಲಿನ ಸುಗ್ಗಿ. ಮತ್ತೊಂದೆಡೆ ಹೊಸ ಜನಾಂಗದ ಧರ್ಮ ವ್ಯಾಖ್ಯೆಯ ವಾತಾವರಣದ ತೊಡಕಿನಲ್ಲಿ ಸಿಲುಕಿದ ಸನಾತನದ ಸಂಪ್ರದಾಯಕನ ಮನೋವೃತ್ತಿ. ಇವುಗಳ ನುಗ್ಗಾಟವೇ ಈ ಪ್ರಹಸನದ ಮೂಲ.

ಸಮಾಜದ ಎದುರು ಜನಾಂಗದ ಕುಂದುಳ್ಳ ಪಾತ್ರಗಳನ್ನು ಎಳೆದು ತರಬಹುದೇ, ಇನ್ನಿತರರು ಅಕ್ಷೇಪಿಸಿ ನಗರೇ? ಎಂದು ಒಬ್ಬ ಗೆಳೆಯ ಕೇಳಿದ. ಈ ಪ್ರಶ್ನೋತ್ತರಗಳ ತಾಕಲಾಟವು ನಡದೇ ಇದೆ. ಪ್ರಹಸನವನ್ನು ರಂಗಭೂಮಿಗೆ ತರಗೊಡದಂತೆ ಕೆಲ ಗೆಳೆಯರು ಪ್ರಯತ್ನಿಸಿದ್ದೂ ಆಯಿತು. ಆದರೂ "ತರುಣ ತಂಡದವರು" ಯಶಸ್ವೀ ರೀತಿಯಾಗಿ ಅಭಿನಯಿಸಿದುದಕ್ಕಾಗಿ ತುಂಬಾ ಉಪಕೃತನಾಗಿದ್ದೇನೆ.

ಈ ಪ್ರಹಸನವನ್ನು ಬರೆಯುವಾಗ್ಗೆ ನನಗೆ ಕೆಲವು ಸಲಹೆ ಸೂಚನೆಗಳನ್ನು ಕೊಟ್ಟ **ಪ್ರೊ. ರಂಗರಾವ ಮುಗಳಿ,** ಎಂ. ಎ., ಬಿ. ಟಿ. ಇವರಿಗೆ ತುಂಬಾ ಋಣಿಯಾಗಿದ್ದೇನೆ. ಕನ್ನಡ ವಾಙ್ಮಯ ಪ್ರಕಾಶನ ಸಮಿತಿ, ಬಾಗಿಲುಕೋಟೆ ಇವರು ಈ ಪ್ರಹಸನವನ್ನು ಪ್ರಕಾಶಿಸಿದುದಕ್ಕಾಗಿ ತುಂಬಾ ಋಣಿಯಾಗಿದ್ದೇನೆ.

**ಬುರ್ಲಿ ವಾಸುದೇವ.**

---

**ಬೇಗನೆ ಅರಳುವದು. ಬೇಗನೆ ಅರಳುವದು.**

**ಸಮಿತಿಯ ೨ನೇ ಕುಸುಮ.**

# ಮುಗಿಲಂಚು.

ಬರಹಗಾರರು:—

**ಶ್ರೀಕೃಷ್ಣ ಮುಳಿಗಿ.**

# ಮುರುಕು ವಿದ್ಯಾ - ಹರಕು ಸಂಸಾರ.

---

**ಪಾತ್ರಪರಿಚಯ:—**

೧ **ವೆಂಕಣ್ಣಾಚಾರ್ಯ:—** (ಸನಾತನ ಧರ್ಮಾಭಿಮಾನಿ).

೨ **ರಂಗಾಚಾರ್ಯ:—** ( ನೆರಮನೆಯವ ).

೩ **ರಾಘು:—** ವೆಂಕಣ್ಣಾಚಾರ್ಯರ ಮಗ (ಸುಧಾರಿಸಿದ ತರುಣ).

೪ **ತಮ್ಮಣ್ಣ:—** ( ರಾಘೂನ ಗೆಳೆಯ)

೫ **ಕಾವೇರಿಬಾಯಿ:—** (ವೆಂಕಣ್ಣಾಚಾರ್ಯರ ಹೆಂಡತಿ).

೬ **ರಮೆ:—** ( ರಾಘೂನ ಹೆಂಡತಿ ).

---

## ಬಾಗಿಲುಕೋಟೆ ತರುಣ ತಂಡದವರು ತಮ್ಮ
## ೭ನೇ ವಾರ್ಷಿಕೋತ್ಸವದಲ್ಲಿ

(ತಾ. ೯-೯-೧೯೩೮)

ಈ ಪ್ರಹಸನವನ್ನು ಅಭಿನಯಿಸಿದಾಗ

## ಪಾತ್ರವಹಿಸಿದವರು.

---

೧ ಶ್ರೀ. ಟಿ. ಜಿ. ಹಳಾಳಿ:— ವೆಂಕಣ್ಣಾಚಾರ್ಯ.

೨ ,, ಎನ್. ಎಚ್. ಪುರೋಹಿತ:— ರಂಗಾಚಾರ್ಯ.

೩ ,, ಭೀಮಾಜಿ ಜೋಶಿ:— ರಾಘು.

೪ ,, ಎಸ್. ಬಿ. ಕುಲಕರ್ಣಿ:— ತಮ್ಮಣ್ಣಾ.

೫ ,, ವ್ಹಿ. ಜಿ. ಬುರ್ಲಿ:— ಕಾವೇರಿಬಾಯಿ.

೬ ,, ಬಿ. ಆರ್. ಕೆರೂರ:— ರಮೆ.

---

## ನೋಟ ೧.

ಸ್ಥಳ:- [ವೆಂಕಣ್ಣಾಚಾರ್ಯರ ಮನೆಯ ಪಡಸಾಲೆ. ಗೂಟಗಳಿಗೆಲ್ಲ ಹರಕ-ಶೀರೆಗಳು, ಪಂಜೆಗಳು ಜೋತು ಬಿದ್ದಿವೆ. ಒಂದು ಮೂಲೆಯಲ್ಲಿ ಚಾಪೆಯನ್ನು ಹಾಸಿದ್ದಾರೆ. ನಡುವೆ ಒಂದು ಕೃಷ್ಣಾಜಿನ, ತೆರೆಯು ಮೆಲ್ಲನೆ ಏಳುತ್ತಿರುವಾಗ ಆಚಾರ್ಯರು ಪ್ರವೇಶಿಸುವರು. ಜನಿವಾರವನ್ನು ಬಲಗಿವಿಗೆ ತೊಡಗಿಸಿದ್ದಾರೆ, ಎಡಗೈಯಲ್ಲಿ ಒಂದು ತಂಬಿಗೆಯನ್ನು, ಮಣ್ಣಿನ ಒಂದೆರಡು ಹೆಂಟೆಗಳನ್ನು ಹಿಡಿದಿದ್ದಾರೆ. ಪಂಜೆಯ ತುದಿಗೆ, ಕಡಲೇ ಸೊಪ್ಪನ್ನು ಹಾಕಿಕೊಂಡಿದ್ದಾರೆ. ಮೈಮೇಲೆ ನಿನ್ನೆ ಹಚ್ಚಿದ ಗಂಧದ ಕಲೆಗಳು ಹಾಗೇ ಸ್ಪಷ್ಟ ಕಾಣಿಸುತ್ತವೆ. ಬಲಗೈ ಬೆರಳಿನಲ್ಲಿ ಬೆಳ್ಳಿಯ ಪವಿತ್ರದುಂಗರವನ್ನು ಇಟ್ಟು ಕೊಂಡಿದ್ದಾರೆ. ಹೆಗಲ ಮೇಲೆ, ಒಂದು ಸಣ್ಣ ಪಂಜಿ-ಯನ್ನು ಹಾಕಿಕೊಂಡಿದ್ದಾರೆ. ಹೊರಗಿನಿಂದ ಬಂದು, ಪಡಸಾಲೆಯಲ್ಲಿ ಕಡಲೆಯ ಸೊಪ್ಪನ್ನು ಸುರವುತ್ತ ಮಕ್ಕಳ ಹೆಸರನ್ನು ಒಂದೊಂದಾಗಿ ಕೂಗ ತೊಡಗುವರು. ಒಬ್ಬರಿಂದಲೂ ಉತ್ತರವು ಬರುವದಿಲ್ಲ ]

**ವೆಂಕಣ್ಣಾಚಾರ್ಯ:—** ಏಽ ನೀನಂ ಇಲ್ಲೇನ ಮನ್ಯಾಗಽಽ ತೊಟ್ಲಾ ತೂಗ ಽಽಽ ಕೂಸು ಅಳ್ತದ್ನೋಡು, ಥೂ-ಥೂ-ಥೂ ಯಾರೂ ಇಲ್ಲಽಽ. ಒಂದೇ ಸವನೇ ಚಿಟ ಚಿಟ ಚೀರ್ತದ ನೋಡು. ತೂಗ್ರಿಷ್ಟು.

**ರಂಗಾಚಾರ್ಯ:—** (ಬಾಗಿಲದ ಹತ್ತರ ನಿಂತು) ಯಂಕಾ, ಒಂದು ಚಿಮುಟಗಿ ನಾಶಿ ಆದ ಏನು ?

**ವೆಂಕಣ್ಣ:—** (ಎದ್ದು ಕೃಷ್ಣಾಜಿನ ತೋರಿಸುತ್ತ) ಬರ್ರಿ ಆಚಾರ್ಽ. ಆದ ಬರ್ರಿ. (ರಂಗಾಚಾರ್ಯರು ಬಂದು ಕೃಷ್ಣಾಜಿನದ ಮೇಲೆ ಕೂಡ್ರುವರು. ವೆಂಕಣ್ಣಾಚಾರ್ಯರು ನಶ್ಯದ ಬುರಡಿಯನ್ನು ಆಚಾರ್ಯರ ಕೈಯಲ್ಲಿ ಕೊಟ್ಟು ಬದಿಯಲ್ಲಿ ಕೂಡ್ರುವರು.)

**ರಂಗಾ:—** (ನಶ್ಯ ಏರಿಸುತ್ತ) ಯಾಕೋ ಯಂಕಾ ಐದತಾಸ ಹೊತ್ತೇರೇದ ಇನ್ನೂ ಸ್ನಾನಾನೇ ಮಾಡಿಲ್ಲಾ! ಜೇಷ್ಠ ಪುತ್ರಂದೇನು ಇವತ್ತ ಪ್ರತಿಮಾರ್ಚನಾ.

**ವೆಂಕಣ್ಣ:**— ಆಚಾರ‍್ರ ಆ ಸೂಳೀಮುಗಾ ಪೂಜೀ ಪುನಸ್ಕಾರಾ ಮಾಡ್ತಿದ್ರs, ನನ್ನ ಸಂಸಾರ ಹರಹರಕ ಆಗ್ತಿದ್ದೀ ಇಲ್ಲಾ.

**ರಂಗಾ:**— ಹೌದೋ ಯಂಕಾ, ನಿನ್ನೆ ರಾತ್ರಿ ಏನಪಾ ಅದು ಗದ್ಲಾs ?

**ವೆಂಕಣ್ಣ:**— ನನ್ನ ಕರ್ಮ ರ‍್ರಿ ಆಚಾರ, ನನ್ನ ಹಣೀಬರಾ (ಹಣಿ ಹಣಿ ಬಡೆದುಕೊಳ್ಳುವನು.)

**ರಂಗಾ:**— ರಸ್ತೀಕ ಬಂದ್ನಿಂತು ಕಲಾಕಲಾ ಬಾಯಿ ಮಾಡೂ ಅಂಥಾ ಪ್ದೇಸಾಗಿತ್ತಪಾ ನಿನಗ? ಸಂಸಾರದಾಗ ಸಹನಮಾಡಕೋಬೇಕಪಾ.

**ವೆಂಕಣ್ಣ:**— ಆಚಾರ ಒಂದsಽ, ಎರಡsಽ, ಎಷ್ಟಂತ ಸಹನ ಮಾಡಕೋಬೇಕ್ರೀ. ನಾಅಂತೇ ಈ ರಂಡೇಮುಕ್ಕಳ ಕೈಯ್ಯಾಗ ತಡದೀನಿ, ಮತ್ತೊಬ್ರಾಗಿದ್ರ ಓಡಿ ಹೋಗ್ತಿದ್ರ‍್ರಿ ಓಡಿ.

**ರಂಗಾ:**— ಒಂದ್ವ್ಯಾಳ್ಯಾಕ್ಕ ಭೈಬೇಕು, ಒಂದ್ವ್ಯಾಳ್ಯಾಕ್ಕ ಬುದ್ಧಿ ಹೇಳಿ ಮುಂದಕ್ಕೆ ಕರಿಬೇಕೊ.

**ವೆಂಕಣ್ಣ:**— ಸಣ್ಣ ಕೂಸೇನ್ರಿ, ಇವರು. ಆಚಾರ ಒಟ್ರಿಸಿ ಬರ‍್ತದ, ನನ್ನ ಹರಕ ಸಂಸಾರಕ್ಕ ಟಿಬ್ಬಿ ಹಾಕಿ ಹಾಕಿ ಸುಮ್ಮನೆ ಕೂಡ್ತಿದ್ದೆ. ಎಲ್ಲಾ ಹೇಳ್ತೀನಿ ಕೇಳ್ರಿ, ಎಂದ್ನಿಂದ್ಮೂ ನೀವು ನಮ್ಮ ಗುರುಗೋಳು. ನಿಮ್ಮುಂದ ಹೇಳ್ದೀ ಮತ್ಯಾರ ಮುಂದ ಹೇಳ್ಬೇಕು ?

**ರಂಗಾ:**— ಹೌದಪಾ. ಎತ್ತೆರಿಗೆಳಿತು, ಕ್ವಾಣ ಕೆರೀಗೆಳಿತು, ಅಂದ್ರ ಸಂಸಾರ ಸಾಗೂ ಬಗಿಹ್ಯಾಂಗಪಾ.

**ವೆಂಕಣ್ಣ:**— ಹಾಂ! ಆಚಾರ ನಾನೂ ಅದನ್ನ ಕೇಳ್ತೀನ್ರಿ. ಏನೋರಪಾ ದೊಡ್ಡವತನ ಅದ, ಹ್ಯಾಂಗಿದ್ರೇನು ಅಂತೀರಾ, ಸಿಳ್ಳೀಮಿಳ್ಳಿ ೧೨ರೂಪಾಯಿ ಎಂಟಣೆ ಬರ‍್ತದನನ್ಪಾಲಿಗೆ. ರಾಯರ ಮನಿ ಘಂಟೀ, ಘಂಟೀ ಬಡದು ಪಲ್ಲ್ಯಾ ತಂದು ಇದ್ದಬಿದ್ದ ಚೂರಚಾರ ಕೆಲ್ಸಾ ಮಾಡ್ದಹೊರ್ತು, ನನ್ನ ಸಂಸಾರ ಶಕಟ ಸಾಗೂ ಹಾಂಗಿಲ್ಲಾ.

**ರಂಗಾ:**— ನಿಂದೊಬ್ಬಂದೇ ಹೀಂಗ ಆಗೇದ ಅಂತಲ್ಲಾ, ಒಟ್ಟಿನ ಮ್ಯಾಲೆ ಅಡ್ನಾಡಿ ಬ್ರಾಮ್ಹಣ್ರ ಪರಿಸ್ಥಿತಿನೇ ಹಿಂಗ ಆಗೇದ.

**ವೆಂಕಣ್ಣ:**—ನೀವೇ ನೋಡ್ರಿ ಇಂಥಾ ಪರಿಸ್ಥಿತಿ ಒಳಗ ರಾಘ್ಯಾ ಹೀಂಗ ಮಾಡಬೇಕೇನ್ರಿ!? ಯಾರೇನು ಲಗ್ನಾ ಮಾಡಿಕೊಂಡಿರೋದಿಲ್ಲ!?

**ರಂಗಾ:**— ಪರಮುನೀ ಮಕ್ಕಳಾ ಅವ್ರೂ, ನೋ-ಡಿ ಮಾ-ಡ ಬೇ-ಕೂ ಆ-ತು.

**ವೆಂಕಣ್ಣ:**— ಹಾಂ! ಹೀಂಗನ್ರಿ. ನಮ್ಮಕ್ಷೀ ನೋಡಿ ಮಾಡ್ಬೇಕು. ನಾ ರಂಡೇಗಂಡಾ, ಅವ್ಗ ಬಾಯಿ ತಗೆದು ಇವಗ ಜೀ-ಜೀ ಅಂದು ಇಪ್ಪತ್ತಾನ್ಸರೆ ಕೇಳಿದಾಗs ಒಂದ್ಮೂರು ಕಾಸ ಕೊಡಬೇಕಾದ್ರs ಜೀವಾ ಬಿಡ್ತಾರ ಜೀವಾ, ಅದನ್ನೇ ಕೊಟ್ಟು, ಕಿರ್ಕಸಾಲೀ, ಕಡ್ಲೀ ಕುಸ್ಲೀ ತಂದ್ಬಡೀತಿರ್ತಿನೀ. ಈ ಮಗಾ ಲಗ್ನಾದಾವ ತಲೀ-ಹಿಡೀತು, ಇದನ್ನ ತಿಂತಿಂದು, ಅಂದು ಧುಸುಮುಸು, ಧುಸುಮುಸು ಉರೀತಿರ್ತಾನ. ಊಟಕ್ಕಂತೂ ಎಲ್ಲ್ಯೂ ಹೋಗುದೇ ಇಲ್ಲಾ. ಮೊನ್ನೆ ಶೇಷಾಚಾರ್ಗೆ ಶ್ರಾದ್ಧಕ್ಕ ಬ್ರಾಮ್ಹಣ್ರು ಯಾರೂ ಸಿಕ್ಕಿದ್ದಿಲ್ಲಂತ, ವಿಶೇಷ ಜೋರ್ಮಾಡಿ ಕರಕೊಂಡು ಹೋದ್ರು; ಅಡೇ ನಾಲ್ಕೂವರಿ ಆಣೆ ಬಂದಿತ್ತು, ಅದನ್ನೇ ನನ್ನ ಕೈಕ್ಕೊಟ್ರ ಮುಗ್ಗಜ್ವಾಳಾನರೇ ಆಗಲಿ ತರಲಿಕ್ಕೆ ಬರೂದಿಲ್ಲs ನಾ ರಂಡೇಗಂಡಾ ಭಕ್ರಿ ಕಟ್ಡಿ ಕಟ್ಡಿ, ಒಸಡಿ ಕಿತ್ತಿಹೋಗ್ಯಾವ ಅಚಾರ, ಆ ನಾಲ್ಕಾಣೆ ಕೊಟ್ಟು ನನ್ಸಸಿ ಮುದ್ಡಿಗೆ ಪಾವ್ಡರು, ಸ್ನೋ, ತಂದ್ಕೊ-ಟ್ಟಾನ!! ಗಳಾಗಳಾ ಅತ್ರ ಸರಿ ಇದನ್ನೋಡಿ.

**ರಂಗಾ:**— ಏನೋ, ಬಿಡೋ, ಈಗಿನ ಫ್ಯಾಶನ ಹಾಂಗ್ಬೀಸೇದ. ತಂದ್ಕೊಟ್ಟದ್ದೂ ಕೊಟ್ಟದ್ದಾನು ಸರಿಹೋತು, ಊಟಕ್ಕ ಯಾಕ ಹೋಗ್ಬಾರ್ದು. ಹೋದ್ರ ಎಷ್ಟೋ ಅನುಕೂಲಾಗ್ತದ ಸಂಸಾರಕ್ಕ.

**ವೆಂಕಣ್ಣ:**— ನಾ ದಿನಾ ತಲೀ ಒಡ್ಕೋತೀನ್ರಿ, ಜುಲ್ಪಿತಗ್ಸ್ಸಿ, ಇಷ್ಟ ಡ್ತಾಗ್ಲ ಸಂಜಾಪ ಬಿಡು, ಚಂಡ್ಕೀ ಬೆಳ್ಸು ಅಂದ್ರೆಲ್ಯಾರೆ ೧೨ನೇ ದಿನದ

ಪೂರ್ವ ಭುಕ್ತ್ಯಕ್ಕs, ಪರ್ಷದ ಸ್ರಾ(ಶ್ರಾ)ದ್ಧಕ್ಕ, ಕೂಡ್ಲಿಕ್ಬರ್ತ್ತದs; ದಂಪತ್ತೂ್ತಟಕ್ಕ ಹೋಗ್ಲಿಕ್ಕೆ ಬರ್ತ್ತದ, ಅಂಪ್ರೆಲ್ಲ್ಯಾರೆ ನಾಲ್ಕಾರು ಜೋಡು ಧೋತ್ರs ಶೀರೇಬರ್ತ್ತಾವ ಅಂತ ಹೇಳಿದರ "ಏನ್ಹುಚ್ಚಿ ಹೋಗೋ ಏನ್ಹುಚ್ಚಿ" ಅಂದು ಕಟ್ಟಿಳೀತಾನ್ರಿ, ನನ್ನ. ಮತ್ತೇನ್ಕೇಳಬ್ಯಾಡ್ರಿ ಸದಾs ಖೋಲೀ ಒಳಗ ಕೂಡೂದು, ಹಿಕ್ಕೂದು, ಹಿಕ್ಕಿಸಿಗೊಂಬೂದು, ಹಿಕ್ಕೂದು ಹಿಕ್ಕಿಸಿಗೊಂಬುದು ತ-ನ-ನ-ನ-ನ ಹಾಡೂದು, ನನ್ನಸಿ ಮುದ್ದು ರಮಾದೇವೆನಕಾ ಯಾವಾಗ್ಲೂ ಕನಡೀ ಮುಂದೇ!.

**ರಂಗಾ:—** ತಾನ್ದೊಡ್ಡ ವೈದಿಕ ಬ್ರಾಹ್ಮಣನ ಕೈ ಹಿಡಿದಾಳ, ಇವೆಲ್ಲಾ ತನಗ್ಯಾಕ?

**ವೆಂಕಣ್ಣ:—** ಅಕೀದು ಎಷ್ಟು ಹೇಳ್ಳಿ ಸಂಪತ್ತು ಆಚಾರs, ಕುಬಸಾ ತೊಟ್ಕೊಂಬೊ ಹಾಂಗಿಲ್ಲಾ, ಟಕ್ಕು ಹಚ್ಚಿದ ಬಿಳೀ ಪೋಲ್ಕಾನೇ ಆಗ್ಬೇಕು. ಸಾಬಾಣಾ ಹಚ್ಚಿ ದಿನಕ್ಕ ಹತ್ತ ಸರ್ತಿ ಮೋತಿ ಗಲಬರಿಸಿಗೋಬೇಕು! ಟೂಥ ಪಾವ್ಡರು ಬೇಕೇ ಬೇಕು. ನಮ್ಮ ಹಣೀಬಾರಕ್ಕs ಸುಟ್ಟ ಕುಳ್ಳ ಪುಡೀ ಸಿಗೂದಿಲ್ಲಾ, ಏನ್ಮಾಡ್ಬೇಕ್ಹೇಳ್ರಿ? ಏನೋರಪಾ ಮಾಡ್ಲೀ ಅನ್ನೂಣs ರಾಯರ ಮನೀ ಮಂದಿ ಹೊತ್ತು ಹುರೀತಾರ್ರೀ- ತಾನು ವೈದಿಕ ಬ್ರಾಹ್ಮಣನ ಹೇಣ್ತಿ? ಛಲೋತ್ನಾಗೆ ಥಾಲೀ ಹಿಡಕೊಂಡು ಊಟಕ್ಕ ಧಡಾಧಡಾ ಹೋಗ್ಬೇಕೋ ಇಲ್ಲೋ, ಥಾಲೀ ಕಚ್ಚೀ ಪದರಿನ್ಯಾಗ ಹಾಕಿ ನಾಕೂ, ವನಪೂ ಮಾಡ್ಕೋತs ಹೋಗುದು ಯಾಕ್ರೆಪಾ ಹೇಳ್ರಿ; ರಾಯರ ಮನಿ ಹೆಣ್ಮಕ್ಕಳು ಇದನ್ನೇ ನೋಡ್ತಿರ್ತಾರ, ಟೀಕಾ ಸುರೂ ಮಾಡಿದ್ರಂದ್ರ ನನಗ ಕೋಟ್ಯೆಡ್ಲ ಬಡಧಾಂಗಾಗ್ತದ, ಕೋಟಿ ಶಿಡ್ಲ !!

**ರಂಗಾ:—** ಹೌದಪಾ, ಈಗಿನ ರಾಯ್ರು ಮೊದ್ಲೇ ವೈದಿಕರ ಟೀಕಾ ಮಾಡ್ತಿರ್ತಾರs, ಇಂಥಾವೆಲ್ಲಾ ಆದ್ರಂತೂ ಮುಗದೇ ಹೋತು.

**ವೆಂಕಣ್ಣ:—** ಕೇಳ್ರಿ ಆಚಾರs ನನ್ನಸಿ ಮುದ್ದಿನ ಕಥಿ, ಇನ್ನೂಕೇಳ್ರಿ, ಮನೀಗ್ಬಂದು ಒಂದು ಒಂದೂವರೆ ವರ್ಷಾತು, ಮಡೀ ಮೈಲಿಗೀ ಜ್ಞಾನಾ ಒಂದ್ನೂರರೆ. ಈಗ ನಾಕಾರು ದಿವ್ಸದ ಹಿಂದ ನಾಯ್ಕರಲ್ಲೆ

ಶನಿ ಜಪಾ ಇತ್ತ್ಯs ಹೋಗಿದ್ದೆ, ಆಗs ಒಂದು ಛಂದಂಥಾ ಕಾಜಿನ ಬಾಟ್ಲಿ ನೋಡ್ದೆ, ಯರಡು ತಾಸು ಕಾದು ಕೂತು, ಗಿಲ್ಟು ಮಾಡಿಮಾಡಿ ರಾಯ್ರು ನಿಮ್ಮ ಗುಣ ಅಂಥಾದು, ನಿಮ್ಮ ಗುಣ ದೊಡ್ಡು, ಉದಾರಿಗಳು, ದಾನಶೂರ್ರು, ಪುಣಿವಂತ್ರು ಅಂದು, ಕಡೀಕೆ ಈ ಬಾಟ್ಲೀ ಖಾಲೀ ಆದ ಕಾಣಸ್ತದ ದಶಂಗದ ಪುಡಿ ಹಾಕಿ ದೇವರ ಮುಂದಿಡಲಿಕ್ಕೆ ನೆಟ್ಟಗದ ಅಂದು, ದೇಶಾವರಿ ಮಾತ್ತಂದು ರಾಯರ ಸಂಪುಷ್ಟದ್ಹತ್ರ ಇಟ್ಟಿದ್ದೆ; ನನ್ನಸಿ ಮುದ್ದು ಹದ್ದಿನ ದೃಷ್ಟಿಗೆ, ಯಾವಾಗ ಬಿತ್ತೋ ಏನೋ, ಅದನ್ನ ಮೈಲ್ಗೀಲೆ ತಗೊಂಡು ದಶಂಗದ ಪುಡಿ ಜಗಲೀ ಮ್ಯಾಲೆ ಸುರವಿ, ಮ್ಯಾಣಾ ತುಂಬಿ ಇಟಗೊಂಡಾಳ್ರಿ, ಮ್ಯಾಣಾ, ಏನಳಬೇಕೋ ನಗ-ಬೇಕೋ ಹೇಳ್ರಿ? ಹೊಲ್ಯಾರ ಮನೀಕ್ಕಿಂತ ಅತ್ತತ್ತಾಗೇದ ನನ್ಮನೀ. ಅಲ್ಲೇ ಪ್ರಾಣದೇವರು-ರಾಯರ ಸಂಪುಷ್ಟ, ಹ್ಯಾಂಗ ತಿಳೀಲಿಕ್ಕಿಲ್ಲಾ ಇವರಿಗೆ ಆಚಾರs, ಸಹನ ಮಾಡಿಕೋ ಅಂತೀರಿ,ಎಷ್ಟಂತ ಸಹನ ಮಾಡ್ಕೊಬೇಕು ಹೇಳ್ರಿ? ಮಂದಿಯೊಳಗ ಮೋತೀ ತೋರಿಸುವ ಹಾಂಗಿಲ್ರೀ. ನಾನು,

**ರಂಗಾ:**—ಏನೋ ಮಹಾರಾಯಾ, ಹುಡಗೀನೂ ಚೂರ್ಕಾರು ಕಲ್ತದ್ದು ಸಾಧಾರಣ ಛಂದನೂ ಅದs, ಛಂದಾ ಚಾರಾ ತಗೊಂಡು ಏನು ಮಾಡೂದದ. ಮನ್ತನಾ ಮುಂದಾಗೋ ಮಾತಪಾ. ಆವನೂ ಬಡ ಬ್ರಾಹ್ಮಣ, ಯೋಗ್ಯ ಮನುಷ್ಯ, ಸಂಭಾವಿತ ಭಾಳ್ಹೇಳ್ಕೊಂಡ ಅಂತ ಮಾಡ್ಡೇವಪಾ, ಉಪಾಯ್ನೇ ಇಲ್ಲಾ? ಈಶ ಇಚ್ಛಾ ಇನ್ನೇನು ಮಾಡೂದದ.

(ಕಾವೇರಿಬಾಯಿಯು ವೆಂಕಣ್ಣಾಚಾರ್ಯರ ಹೆಂಡತಿ, ಚಿವುಟದರೆ ರಕ್ತಬಾರದ ಮುಖ, ಕಪ್ಪು ಮೈ, ಸೊರಗಿದ ಶರೀರ, ಮುಸುರೆ ತಿಕ್ಕಿದ್ದ-ರಿಂದ ಇನ್ನೂ ಕೈ ಕಪ್ಪಿದೆ. ಹಾಗೆಯೇ ಬರುವಳು.)

**ಕಾವೇರಿಬಾಯಿ:**— ನನ್ನ ಕರ್ಮ್ರಪಾ ನೀವೇನ್ಮಾಡಿರಿ ಹಗಲ ರಾತ್ರಿ ದುಡ್ಡುದ್ದುಡ್ಡು ಸಾಯೂದು ಬರದದ ನನ್ನ ಹಣೀಮ್ಯಾಲೆ, ಒಬ್ರೂ ಹೇಳ ವರು ಇಲ್ಲಾಂಗಾತು, ಇಂಥಾ ಹೊತ್ತಿನ್ಯಾಗಸೈತ (ಸಹಿತ) ಖೋಲ್ಯಾಗ ಕೂತ್ರ, ನಾವೊಬ್ಬಾಕಿನೇ ಸಾಯ್ಬೇಕೇನೋ ಇಲ್ಲೇ.

**ವೆಂಕಣ್ಣ:**— ಏs ಬಾಯ್ಮಾಡಬ್ಯಾಡ್s ಇಲ್ಲೀ ಇದ್ದಾರ.

**ಕಾವೇರಿ:** — ಹೂಂ ಹೀಂಗ ಅಂಜೆಂಜೆ ನಮ್ಮ ಸ್ಥಿತಿ ಹೀಂಗಾಗೇದ, ನನ್ನ ಮಗನ ಕೆಡಿಸಿದಾಕ್ನೆ ಆ ಹೊಯ್ಮಾಲಿ! ಎಂಥಾ ಛಲೋ ಇದ್ವಾ ಮೊದಲ, ಇಕಿ ಬಂದಾಳ್ಬಂದಾಳ ಏನ ಮಾಡ್ಯಾಳೋ ಏನೋ, ನನ್ಮಾತೇ ಕೇಳೂದಿಲ್ಲಾ, ತಿರ್ತಿರಿಗಿನಾದಸ್ತಾನ

**ರಂಗಾ:**— ಗಂಡಾ ಹೇಣ್ತಿ ನೆಟ್ಗಿದ್ದಾರೋ ಇಲ್ಲೋ ಕಾವೇರಿಬಾಯಿ; ಆತು, ನೋಡಿ ಸಂತೋಷಪಟ್ರಾತು.

**ಕಾವೇರಿ:**— ಹೂಂ! ನಾ ಕಣ್ಣಿಗೆ ಕಣ್ಣು ಹಚ್ಚಿ ದುಡ್ದು ಸತ್ತರೂ ಚಿಂತಿ ಲ್ಲ್ಯಾಕs, ಏನ್ಮನಿಯೊಳಗ ಮೂರೇ ಮಂದೀs, ನಾಲ್ಕೆಂಟು ಹುಡುಗರು, ನಾವು, ನದೀ ಇರ್ತದs, ಭಾವಿ ಇರ್ತದs, ನೀವೇ ಹೇಳ್ರಿ ರಂಗಾಚಾರ್ರ ಈಕೇನು ಬಾಬಾಸಾಹೇಬನ ಹೇಣ್ತೆ? ಕೂಸಿನ ಹೇಲರಬಿ ಒಕ್ಕೊಂಡಬಾ ಅಂದ್ರ ಕೆಟ್ಟಿವಾಸ್ನೆವ್ವಾ ಅದ್ನನ್ಯಾರು ಒಕ್ಕೊಡ್ಬಂದಾರುs ಅಂದ್ಲು. ಅಂದ್ಬಳಿಕ ಏನ್ಮಾಡ್ಬೇಕೂ ಹೇಳ್ರಿ, "ಯಾಕ್ರೀ ಕಾವೇರಬಾಯ್ರ ನೀವು ಬಂದೀರಿ ಭಾಂವ್ಗೇ; ನಿಮ್ಗಸಿ ಬರ್ಲಿಲ್ಲಾ" ಅಂತಾರ. ನಮ್ಮನೀ ಹುಳ್ಕ ಮಂದೀ ಮುಂದ ಹೇಳೂದದನs?

**ರಂಗಾ:**— ದೊಡ್ಮನುಷ್ಯಳವ್ವಾ ನೀನೇ, ಸಹನ ಮಾಡ್ಕೊತೀದೀ ನಡಿತದವ್ವಾ, ಮುಚ್ಕೋಬೇಕವ್ವಾ ಸಂಸಾರ್ದ ಹುಳ್ಕ—

**ಕಾವೇರಿ:**— ನಾ ಒಬ್ಬಾಕೀನೇ ಮುಚಕೊಂಡ್ರ ಎಷ್ಟಾದೀತ್ರೀ.... ಮನೀ ಅಂದ್ಬಳಿಕ ಒಂದಿರ್ತದ ಒಂದಿರೂದಿಲ್ಲಾ, ಇಸಿಗ್ಗಿ ಮಿಸಿಗ್ಗಿ ಆ ಕುಲ್ಕರ್ಣಿ ಕಲ್ಲವ್ವ ಮುಂದs, ಎಲ್ಲುಗ್ಗೆದ್ದಂಕೀ ಮುಂದs, ನಮ್ಮನೀ ಹುಳ್ಕ್ಯೋಳಿ ಆಡ್ಕೊಂಡ್ರೇನ ಮಾಡ್ಬೇಕೂ ಹೇಳ್ರಿ. ಈ ಹುಚ್ಚೊಬ್ಸ್ಗೇನು ತನ್ಮನ್ಯಾಗ ಪಂಚಪಕ್ವಾನ್ನಾ ತಿಂತಿದ್ದಾಳ ದಿನಾ? ಎಲ್ಲಾs ಗೊತ್ತದ ನನ್ಗ, ಕಸಾ ಅದs, ಮುಸುರಿ ಅದs, ತೊಳಿಯೂದ ಅದ, ಬಳಿಯೂದ ಅದ, ಅಲ್ಹೋಗಿ ಕೂತ್ರ ಸಾಯ್ಬೇಕನಾ ಇಲ್ಲೆ? ಏನ್ಮಾಡ್ಬೇಕಾದೀತೂ ಹೇಳ್ರಿ. ದುಡುದ್ದುಡುದು ನಮ್ಯೆಂದು ನಮಾಗಬೇಕು, ಬೆಂಕೀ ಹಚ್ಲಿ.

**ವೆಂಕಣ್ಣ**:— ಏsss, ಹೋಗss, ಎಷ್ಟಾಬ್ಬಯಿ ಮಾಡ್ತಿ ಹೋಗು, ಬಂದದ್ದನಘೋಗ್ಸಬೇಕು, ಒಳ್ಳೇs ಅಂದ್ರು ಬಿಡ್ತದs.

**ಕಾವೇರಿ**:— ಮಾರ್ಗಿ ಶರಗ್ಹಕ್ಕೊಂಡು ಅತಗೋತ್ಕೂಡ್ರಿ ಆವ್ರುಂಡೀ ಹಾಂಗ, ಒಂದಿಷ್ಟೇನಾದ್ರು ದರ್ಪಿಟ್ಟಿದ್ದ್ರು ಚಿಂತಿಲ್ಲಾ, ಎಲ್ಲಾ ದರ್ಪ ನನ್ಮ್ಯಾಲೇ ಇರ್ತದ ಬೆಂಕೀ ಹಚ್ಲಿ.

**ವೆಂಕಣ್ಣ**:— ಅಲ್ಲsss, ಏss, ನಾನರೇ ಏನ್ಮಾಡ್ಲೇ, ನಂನ್ಮೊತ್ತಿತಗ್ಗ್ದ್ರು ನನ್ಗೇನಾಚಿಕಿ, ಹೌದಲ್ರಿ ಆಚಾರ, ಹಂಗೇ ನೋಡ್ಕೋತ ಸುಮ್ನೇ ಕೂಡ್ತಿನಿ ಬಾಯಿಮ್ಯಾಲೆ ಕೈ ಇಟ್ಗೊಂಡು.

**ಕಾವೇರಿ**:— ಸುಮ್ಕೂತ್ರs ಮತ್ತಿಷ್ಟು ಹಾರ್ಯ್ಯಾಡ್ತಾವ ಮಂಗ್ಯಾಗೋಳು, ಒಮ್ಮೆ ಛಲೋತ್ನಾಗ ಝಾಡ್ಸಿದ್ರು ಮನೀ ಮುಂದಿನ್ನಾಯಿ ಆಗಿಬೀಳ್ತಾರ ನಾಯಿ ಆಗಿ, ಬೆಂಕೀ ಹಚ್ಲಿ, ಅಂಜೂದೂ ಅಂಜೂದು ಎಲ್ಲೀತನಕಾದು.

**ವೆಂಕಣ್ಣ**:— ಆಚಾರ್ರ, ಒಂದಗಳು ಹಿಚಿಕಿ ನೋಡ್ತಾರ ಯಾರರ, ಅವ್ರೂ ದೊಡ್ಡವ್ರಾಗ್ಯಾರ, ಮೊನ್ನೆ ನಾಕ್ತಾಸ ರಾತ್ರ್ಯಾಗಿತ್ತೇನ್ರಿ,ರಮಾ, ರಾಘ್ಯಾ ಇಬ್ರೂ ಹೊರಗ ಹೊಂಟ್ರು, 'ಎಲ್ಗೆ ಹೋಗ್ತಿಯಪಾ' ಅಂತ-ಒದರ್‍ದೆ,'ತಂಗೊಂಡೇನ್ಮಾಡ್ತಿಯಪಾ, ಸುಮ್ಕೆಬಿದ್ಕಾತು,ಅದೆಲ್ಲ ಪಂಚೇತಿ ನಿನಗ್ಯಾಕs' ಅಂದಾ, ಅಚಾರ, ಇದ್ದಾಂವ ಅಲ್ಲಾ, ಸತ್ತಾಂವ ಅಲ್ಲಾ s ಸುಮ್ಮನೆ ಕೂತೆ ದೆವ್ವಬಡ್ದವರ್ಹಾಂಗ.

**ರಂಗಾ**:— ಹೌದಪಾ ಯಂಕಾ, ಹಿರ್ಯ್ಯಾರು ಕಿರ್ಯ್ಯಾರು ಅನ್ನೊ ಭಾವ. ನಾನೇ ಇಲ್ಲೋ ಈಗಿನ ಹುಡ್ಗೂರ್ಗೆ, ತಾಯ್ಗೂ ಎಟ್ಟೆಟ್ಮಾತು, ತಂದ್ಗೆ-ನಕಾ ಸರೇಸರಿ, ಏನ್ದಿನಾ ಬರ್‍ಲಿಕ್ಕೆ ಹತ್ತಿದುವೋ.

**ವೆಂಕಣ್ಣ**:— ಇಂಥಾ ಇರ್ಕಿನ್ಯಾಗಿಂದ ನಾಹ್ಯಾಂಗ ಪಾರಾಗ್ಬೇಕ್ರೆಪಾ, ನಾ ಎಲ್ಯ್ಯಾರೆ ದರ್ಭದ ಗಂಟ್ಬಗಲ್ಗೆ ಹಕ್ಕೊಂಡು ಅಪರs, ಸುಡ್ಗಾಡ ಏನಾರೆ ಮಾಡ್ಸಿ, ಈ ಸಂಸಾರಕ್ಕ ತಂದ್ಬಡೀತೀನಿ, ಇಲ್ಲೇ ಹೀಂಗ ರಂದೀ ರಷ್ಕಸಿ ನಡದ್ರು ಉರ್ಲ ಹಕ್ಕೊಂಡು ಸಾಯ್ಬೇಕೂ ಅನ್ಸತ್ತದ.

**ಕಾವೇರಿ:**— ಆತು, ಇದೇs ಆತು, ಸೊಸೆ ಬಂದ್ರೇನು ಮಕ್ಕಳು ಬಂದ್ರೇನು ನಂನ್ದುಡತ್ತೇನು ತಪ್ಲಿಲ್ಲ ಬೆಂಕೀ ಹಚ್ಲಿ, ಇಷ್ಟು ದಿವ್ಸ ವೈದ್ಯನಂದ್ರ ಕೈಯ್ಯಾಗ ಉರಿಯೂದಾತು, ಇನ್ನ ಉಳ್ದ ಕಾಲೆಲ್ಲಾs ಸಸೀ ಕೈಯ್ಯಾಗ, ಅಂತೂ ನನ್ನ ಜೀವ್ನಕ್ಕೇನು ಸುಖಾ ಇಲ್ಲಾ ಬೆಂಕೀ ಹಚ್ಲಿ.

**ವೆಂಕಣ್ಣ:**— ಏ, ಎಷ್ಟು ಕಾರ್ಭಾರ ಮಾಡ್ತಿಯೇ ಹೋಗು, (ಕಾವೇರಿಬಾಯಿಯು ಹೊರಟು ಹೋಗುವಳು)

**ರಂಗಾ:**— (ನಿಟ್ಟಿಸುರಿಕ್ಕುತ ನಶ್ಯದ ಬುರಡಿಯನ್ನು ಬಗ್ಗಿ ತೆಗೆದು-ಕೊಂಡು) ಅಲ್ಲೋ ಯಂಕಾ, ಹದ್ನೆಂಟಕಡ್ಗೆ ಓಡ್ಯಾಡ್ತಿದಿ. ಕೋರ್ಟಿನ್ಯಾಗ ಪಾರ್ಟಿನ್ಯಾಗ ಬರಿಯೂದಕ್ಕಿಟ್ಟಬಾ, ಕಡೀಕ ನಮ್ಮ ವಕೀಲ್ರಲ್ಲೆರಿ ಇಡೂ, ಅಂದ್ರ ಒಂದ ಹಾವ್ನೋ, ಖಾಲೀ ಕೂತ್ರ ಏನದು? ಹ್ಯಾಂಗೂ ಜಡ್ಜನೂ ನಮ್ಮವನೇ ಇದ್ದಾನ, ಇನ್ನೊಮ್ಮೆ ಹೋಗಿ, ಅವನ್ಕಾಲೇ ಹಿಡ್ಕೋ.

**ವೆಂಕಣ್ಣ:**— ಈ ದುರಭಿಮಾನಿ ಸೂ........ಮಕ್ಕಳಿಗೆ ಅಂಥಾ ಕೆಲ್ಸ-ಸರೀ ಬರೂದಿಲ್ರಿ ಈಗಿನ ದಿವ್ಸದಾಗ, ಏನ್ನಸೀಬ ಇತ್ತೋ ಏನೋ, ಸುಡಗಾಡ ಇಂಗ್ರೇಜಿ ಆರೆತ್ತೇ ಒಂದು ಪಾಸಾಗ್ಯಾನ, ಬಿ.ಏ., ಆಗೀನಿ ಅಂತ ಕಲ್ಪನಾ ಆಗೇದ ಅವ್ಗ, ಮೊನ್ನೆ ಹೋದಾಗ ಜಜ್ಜನ್ಹೇಣ್ತೀ ಮುಂದ ಕೂತು ಅತ್ತ ಬಂದೀನಿ, ಆಕೀನೆ ಆಚಾರ ಅಳ್ಬ್ಯಾಡ್ರಿ ನಮ್ಮವ್ರ ಮುಂದ್ಹೇಳಿ ನಿಮ್ಮ ಕೆಲ್ಸಾ ಮಾಡಸ್ತೀನಿ ಅಂದಾಳ. ಇನ್ನೊಮ್ಮೆ ಹೋಗಿ ಘಟ್ಯಾಗಿ ಆಕೀ ಕೈಕಾಲೇ ಹಿಡ್ಕೋತೀನಿ.

**ರಂಗಾ:**— ತೀವ್ರ ಅಷ್ಟ ಮಾಡಿ ಬಿಡಪಾ ಹೋಗ್ಲೀ, ಲಗ್ನಾ ಒಂದ್ಮಾಡಿದ್ಯಾ, ಹದ್ನೆಂಟ ಮಂದೀ ಕಾಲ ಹಿಡಕೊಂಡು. ನಿನ್ನ ಕೈಲಾದಷ್ಟು ಕಲ್ಸೀ, ಅನ್ನದ ಆಧಾರ ಒಂದಿಷ್ಟು ಮಾಡ್ಬಿಡು ಮತ್ತs

(ಇಷ್ಟು ಹೊತ್ತಿಗೆ ರಾಘೂ ರಮೆಯರು ಕಲಕಲ ಬಾಯಿ ಮಾಡುತ್ತ ಬರುವರು. ರಾಘೂ ಸುಧಾರಿಸಿದ ತರುಣ, ಕ್ರಾಫನ್ನು ಓರಣವಾಗಿ ಬಾಚಿದ್ದಾನೆ, ರಮೆ ರಾಘೂನ ಹೆಂಡತಿ, ಸುಧಾರಿಸಿದವಳು, ವಯಸ್ಸು ಕ್ರಮವಾಗಿ ೨೨-೧೭, ಇಬ್ಬರೂ ಒಂದೇ ಕನ್ನಡಿಯನ್ನು ಹಿಡಿದಿದ್ದಾರೆ.

ಒಂದು ತುದಿಯನ್ನು ರಾಘೂ, ಒಂದು ತುದಿಯನ್ನು ರಮೆಯು ಹಿಡಿದು ಜಗ್ಗಾಡುತ್ತಲಿದ್ದಾರೆ. ರಮೆಯು ಮತ್ತೊಂದು ಕೈಯಲ್ಲಿ ಸ್ನೋದ ಡಬ್ಬಿಯನ್ನು ಹಿಡಿದಿರುವಳು.)

**ರಾಘು:**— ನಾ ಮೊದ್ಲ ಹಚ್ಕೊಂಡು ಕೊಡ್ತೆನ್ನಿಂದ್ರs.

**ರಮೆ:**—ಊಂ. ಹೂಂ. ನಾನೇ........ಮೊದ್ಲು,

**ರಾಘು:**—ಊಂ. ಹೂಂ. ನಾನೇ........ಮೊದಲ, ತಾ, ತಾ, ಸ್ನೋ.

**ವೆಂಕಣ್ಣ:**— ಅಚಾರ್ರs ನನ್ನ ಸಂಸಾರ ಛಿದ್ರಾ ನೋಡ್ರಿ, ಏನ್ಹರಕ ಸಂಸಾರೋ, ಮುರಕ ಸಂಸಾರೋ ಹೇಳ್ರಿ! ನಾಚ್ಕೆ ಅದ ಏನ್ನೋಡ್ರಿ ಆ ಗಂಡ್ಹೆಣ್ತಿಗೆ.

**ರಮೆ:**— ಕನಡೀ ನನ್ನ ನೀಂದ ತಂದೀನಿ, ಇದರ ಮ್ಯಾಲೆ ನಿಮ್ದೇನದ ಅಧಿಕಾರ್ರs.

**ರಾಘು:**— ಹೌದ ಶಾರ್ರs, ನಿನ್ನ ಮ್ಯಾಲೇ ಯಾವಾಗ ನನ್ನ ಅಧಿಕಾರ್ನ-ಡೀತದs ಅಂದ್ಬಳಿಕ ನಿನ್ನ ನಡೀನೂ ನನ್ನ ಅಧಿಕಾರಕ್ಕೊಳಪಟ್ಟಾಂಗೇ.

**ರಮೆ:**—ಹೂಂ-. ಹಂಗೇ ಆಗ್ಲಿ. ಸ್ನೋ ನೆಟ್ಗ ಹತ್ತೇದೋ ಇಲ್ಲೋ ನೋಡ್ಕೊಂಡು ಕೊಡ್ತೇನಿ ನಿಂದರ್ರಿ.

**ರಾಘು:**— ನಾ-ಮೊದ್ಲs.

**ರಮೆ:**—ಊಂ ಹೂಂ- ನಾಮೊದ್ಲ, ನನ್ನ ಸ್ನೋ.........

**ವೆಂಕಣ್ಣ:**— (ಎದ್ದು ರೊಚ್ಚಿನಿಂದ) ಏ- ಹುಚ್ಚೋಸ್ತ್ರೀ, ಮಾನಾ ಮರ್ಯಾದಿ ಅದನೋ ಇಲ್ಲೋ ನಿನಗ, ಯಾರ ಕೂತಾರ, ಯಾರಿಲ್ಲಾ ಕಣ್ತಗದು ನೋಡು, ಏs ರಾಘ್ಯಾ........

**ರಮೆ:**— (ಅವರ ಮಾತಿನ ಕಡೆಗೆ ಲಕ್ಷ ಕೊಡದೆ) ನನ್ನ ಸ್ನೋ ಅದ, ನಾ ಮೊದ್ಲ, ನೀವೇನು ರೊಕ್ಕಾ ಕೊಟ್ಟ ಕೊಂಡ್ಕೊಡೂ ಸಂಭ್ರಮನೂ ಅಷ್ಟ್ರಾಗs ಅದ. ಮತ್ತ ನಂದೇ ಬೇಡ್ಲಿಕ್ಕೆ ಬರ್ತಾರ, ಹಗಲಲ್ಲಾ, ಸಂಸರಿರಿ............

**ರಾಘು:**— ಹೌದತಾದs ಎಷ್ಟ್ಬಾಯಿ ಮಾಡ್ತಿಯೇ? ಹಚ್ಕೊಂಡು ಕೊಡ್ತೀನತಾ. (ಹೆಗಲಿಗೆಕೈಹಾಕಿ ನಿಲ್ಲಿಸುವನು.)

**ರಮೆ:**— ಇದೇನು ಅಸ್ಯೆಂಯಿ ತಗೀರಿ. ಅಸ್ಯೆಂ ಅಸ್ಯೆಂ ಮಾಡ್ಕೋತ. ಕೊ-ಡೂ-ದಿಲ್ಲಾ (ಒನಪಿನಿಂದ ಒಳಕ್ಕೆ ಓಡಿದಳು, ರಾಘೂನು ಬೆನ್ನಟ್ಟಿದಾ)

**ವೆಂಕಣ್ಣ:**— ಆಚಾರ ನೋಡ್ರಿ, ಹ್ಯಾಂಗ್ಸಹನ ಮಾಡ್ಕೋಬೇಕು, ನೀವೇ ಹೇಳ್ರಿ.

**ರಂಗಾ:**— ಇದೆಲ್ಲಾs ನಮ್ದೇ ತಪ್ಪೋ ಯಂಕಾ. ಇದ್ಯಾತರ ಪರಿಣಾಮಂತೀದೀ. ಅರ್ಧಮುರ್ಧಾ ಟಿಸ್, ಪಿಸ್ ಇಂಗ್ರೇಜಿ ವಿದ್ಯಾದ ಪರಿಣಾಮನೋಡು ಇದೆಲ್ಲಾ. ಸುಮ್ನೇ ಯಾಜ್ಞೀಕಾಕಲ್ಸಿ, ನಾಕ ಯುಜಮಾನ್ರ ಮನೀ ಘಂಟೀ ಬಡೀಲಿಕ್ಕೆ ಹಚ್ಚಿದ್ದೆಂದ್ರ, ಇದೆಲ್ಲಾ ಹುಚ್ಚುಚ್ಚಾರ, ಡೌಲು, ಗೊತ್ತಾಗ್ತಿದ್ದೇs ಇಲ್ಲಾ. ನಮ್ಮ ಹತ್ಲ್ಯಾರೆ ಕೋತ್ತಿರ ಬೇಕು ಪೂರಾ ಕಲ್ಸಿಬೇಕು. ಅಂದರ ಚಿಂತಿಲ್ಲಾ; ಇತ್ಲಾಗ ಇದೂ ಇಲ್ಲಾ, ಅತ್ಲಾಗ ಅದೂ ಇಲ್ಲಾ ಕೆಟ್ಟಿಟಾ ಒಂದೇ ಖರೇ.

**ವೆಂಕಣ್ಣ:**— ಹೌದ್ರೀ ನಾಥಡ್ಡಾದೆ, ದರ್ಪದ ಗಂಟು ಹೊರ್ಲಿಕ್ಕೆ ಹಚ್ಚಿದ್ದೆಂದ್ರ ನನ್ನಗತೀ ಹೀಂಗಾಗತಿದ್ದೇ ಇಲ್ಲಾ. ಆಶಾ, ಆಶಾ ಬಹಳ ಕೆಟ್ಟದ್ರಿ, ನನ್ನ ಮಗಾ ಸಾಯ್ಬಾ(ಸಾಹೇಬ)ದಾನೂ, ದೊಡ್ಡ ನೌಕ್ರೀ ಮಾಡ್ಯಾನು, ಕಡೀಕ **ಎಚ್. ಪಿ.** ಬೋರ್ಡರೇ ಬಾಗ್ಲಕ್ಕ ಬಡದಾನೂ ಅಂತ ಮಾಡಿದ್ದೆ. ಶಟವಿ ಬರದಾಳ ನನ್ನ ಹಣೀಮ್ಯಾಲೆ, (ಕೆಲಹೊತ್ತು ಮೌನತೆ, ವೆಂಕಣ್ಣಾಚಾರ್ಯರು ಹಟತ್ತಾಗಿ ತಲೆಬಾಗಿಲ ಕಡೆಗೆ ನೋಡಿದರು. ಆತುರದಿಂದ ಎದ್ದು)

**ವೆಂಕಣ್ಣ:**— ಏ, ಆಕಳ ಸೆಗಣೀ ಹಾಕ್ತದ ನೋಡs.

**ರಂಗಾ:**—ಇರ್ಲೇಳೋ ಎಷ್ಟು ಚಗೊಂಡೀಯಪಾ ಸಂಸಾರಾ, ಹೋಗಿ ಬರೂಣು ನಡೀ, ಸ್ವಲ್ಪ ಹಣಮುಂದೇವರ ಗುಡೀ ಕಡೆಗೆ—

(ಉಸರ್ಗರೆಯುತ್ತ ವೆಂಕಣ್ಣನು ರಂಗಾಚಾರ್ಯರೊಂದಿಗೆ ಹೊರ-ಟನು, ಕೊಂಚ ವೇಳೆಯಲ್ಲಿಯೇ ರಾಘವೇಂದ್ರನು ಸಿಳ್ಳುಹಾಕುತ್ತ ಬಂದು, ಬಾಗಿಲಬಳಿಇದ್ದ ಬೂಟನ್ನು ಒರೆಸಿ ಹಾಕಿಕೊಂಡು ಹೊರಗೆ ಹೊರಟ. ಕಾವೇರಿಬಾಯಿಯು ಬಂದು ಕಸಗುಡಿಸತೊಡಗುವಳು. ಈ ಸಮಯ-ದಲ್ಲಿ ರಮೆಯು ತನ್ನ ಕೊಟಡಿಯಲ್ಲಿ ಕುಳಿತೇ ಹಾಡುತ್ತಲಿರುವಳು. ಒಳಗಿದ್ದ ಕೂಸು ಅತಿಯಾಗಿ ಅಳತೊಡಗುವದು, ಕಾವೇರಿಬಾಯಿಯು ಹೋಗಿ ಕೂಸನ್ನು ಕರೆದುಕೊಂಡು, ಹುಳಕು ಹುರಳಿಯಿಂದ ತುಂಬಿದ ಮರವನ್ನು ತೆಗೆದುಕೊಂಡು ಬಂದು, ಕೂಸನ್ನು ತೊಡೆಯ ಮೇಲೆ ಹಾಕಿಕೊಂಡು, ಹುರಳಿಯನ್ನು ಕೇರಹತ್ತುವಳು. )

**ಕಾವೇರಿ:—** ಮಗಾ ಕಲ್ತು ನಾಕ ದುಡ್ಡ ತಂದಾನೇನೋ, ನನ್ನ ಬಡತನಾ ಹಿಂಗೀತೇನೋ ಅನ್ಕೋತ, ಮಳೀ ಹಾದೀ ನೋಡಿದ್ಹಾಂಗ ನೋಡತ್ತಿದ್ದೆ; ಆತು ನನ್ನ ಆಶಾ, ಮಳೀ ಬರೂಮುಂದ, ಸಕ್ರೀ ಹಿಡದ್ಹಾಂಗ ಆತು. ನನ್ನ ದೈವದಾಗ ಉಡ್ಲಿಕ್ಕೊಂದು ಸೀರಿಲ್ದೆ ಹೊಟ್ತುಂಬ ಮುಗ್ಗ ಜ್ವಾಳದ ಭಕ್ರಿ ಸಹಿತ ಇಲ್ದೇ ಸಾಯೀ ಅಂತ ಬರ್ದದ. ಆಗ್ಲೀ ಎಷ್ಟು ವಿಚಾರ ಮಾಡಿವರೇನು, ನನ್ಮಗನ್ನೇ ತನ್ನ ಕಡೆ ಮಾಡ್ಕೊಂಡಾಳ, “ **ಸಸಿ ಬಂದು ಮಗನನ್ನು ಕಸಗೊಂಡು ಹೋಗ್ಹಾಗ। ಕಿಸಿಯವ್ವ ಬಾಯಿ ಮುಗಲೀಗೆ । ಕಿಸಿಯವ್ವ ಬಾಯಿ ಮುಗಲೀಗೆ ಕಾವೇರಿ । ಬಾಯಿ ಬೀಡವ್ವಾ ಬಕಬಕ**” ಅನ್ನು ಹಾಂಗೇ ಆತು ನನ ಸ್ಥಿತಿ.

( ರಮೆಯು ಕಚ್ಚೆತಿದ್ದಿಕೊಳ್ಳುತ್ತ, ಹಾಡುತ್ತ ಬರುವಳು )

**ರಮಾ:—** ಹಾಡು:—

ಚರಣಕಮಲಕೆರಗಿ । ಸಲೆ ಪ್ರಾರ್ಥಿಪೆವು
ಶಿರಿವರದಾಯುಧ ಕರವಿರಿಸಿ ಹರಿಸೆ
ಗಿರಿವಿಂಧ್ಯವನ ವಸಿತೆ ಕರ್ನಾಟಕಾಂಬೆ ತವ
ಚರಣಕಮಲಕೆರಗಿ ಸಲೆ ಪ್ರಾರ್ಥಿಪೆವು. ॥ ೧ ॥

**ಕಾವೇರಿ: —** ಹಾಡ ನಮ್ಮವ್ವಾ ಹಾಡು ಪುಣವಂತಿ ಇದ್ವೀದಿ ಹಾಡು,

**ರಮೆ:**—ಮುಂದ್ಹೋಡಿ ಕೆಲ್ಸಾ ಮಾಡ್ತಾರ್ದೀನ್ರೀ ನನ್ಹಾಡ ತಗೊಂಡು ನೀವೇನ ಮಾಡ್ತೀರಿ, ಹಾಡತೀನಿ ಬೇಕಾದ್ರು ಬಿಡ್ತೀನಿ,ಅದೆಲ್ಲಾ ಕಾರ್ಭಾರ ನಿಮಗ್ಯಾಕ? ಅತ್ತೆಂತ ಮಾತಾಡ್ತಿರಬೇಕು ನೀವೆಲ್ಲಾ! ಹೂಂ! ಬಿಡ್ರಿ ಇದನೆಲ್ಲಾ.

**ಕಾವೇರಿ:**— ಅಲ್ಲವ್ವಾ, ನಾ ನಿನ್ನತ್ತಿ ಅಲ್ಲೇ ಅಲ್ಲಾ, ನೀನೇ ನನ್ನ ಅತ್ತಿ, ನಾನೇ ನಿನ್ನ ಸಸಿಯವ್ವಾ! ನಿನ್ಮನೀಗೆ ನಡೀಲಿಕ್ಕೆ ಬಂದೀನೆವ್ವಾ ನಾನು, ಅಂದಲ್ಲೇ ನಿನ್ನ ಕೂಡ್ಸಿ ಮಾಡ್ತೀನವ್ವಾ!!

**ರಮೆ:**--ಮಾಡ್ತೀನಿ, ಮಾಡ್ತೀನಿ, ಏನ್ಮಾಡ್ತೀರ್ರಿಮಾರೀ ಮೂರ್ಕಡೇ, ಯಾಕ, ನನ್ನ ಸಂಗ್ತಿ ಬಡದಾಡಬೇಕಂತ ಮಾಡೀರೇನು? ನಾ ಹಾಡಿದ್ರೂ ಸಹನಿಲ್ಲ! ಕೂತ್ರ ಸಹನಿಲ್ಲ! ನಿಂತ್ರ ಸಹನಿಲ್ಲ! ಹೊಟ್ಟ್ಯುರೀತ-ದಲ್ಲಾ ನಿಮಗಃ?

**ಕಾವೇರಿ:**—ಇಲ್ಲ ನಮ್ಮವ್ವಾ ತಪ್ಪತಪ್ಪಾತು, ಗಲ್ಲಗಲ್ಲ ಬಡ್ಕೋತೀನಿ, ಮುಂದಿ ಬಂದಾರ್ಹೋಗ ನಮ್ಮವ್ವಾ, ನಂದೇ ತಪ್ಪಾತಹೋಗವ್ವಾ! (ಕೂಸನ್ನು ಕುಕ್ಕರಿಸಿ ಸಸಿಗೆ ನಮಸ್ಕರಿಸುವಳು)

**ರಮೆ:**—ನೀವೇ ಹೋಗ್ರಿ, ನನಗ್ಯಾಕ ಹೋಗಂತೀರಿ, ಒಂದೊಸ್ತಿಲ್ಲಾ, ಒಂದೊಡವಿಲ್ಲಾ! ಇಡ್ಸೂದಿಲ್ಲಾ ತೊಡ್ಸೂದಿಲ್ಲಾ! ಮುಂಜಾನಿಂದ ಸಂತನಕಾ, ಟಿಸಿಟಿಸಿ ಮಾತೇ, ದರಿದ್ರಗೋಳು;

**ಕಾವೇರಿ:**—ಹೌದವ್ವಾ ನಾವು ದರಿದ್ರು, ನೀ ಶ್ರೀಮಂತಿ ಇದ್ದೀದಲ್ಲಾ ಅಷ್ಟೇ ಸಂತೋಷವ್ವಾ ನಮಗ.

**ರಮೆ:**— ಎಷ್ಟ್ಯಾಕ್ರತ ಬೆಳಸ್ತೀರದು, ಮುಂಜಾನೆಲ್ಲೂ ಝುಗಳ ಸಿಕ್ಕಿ-ಲ್ಲೇನು ಭಾಂವಿಮ್ಯಾಲೆ, ನಾ ಶ್ರೀಮಂತೆಂತ ಹೇಳ್ಕೊಳ್ಳಿಕ್ಕೆ ಬಂದಿದ್ನೇನು ನಿಮ್ಮುಂದ, ನಾ ಹೀಂಗೇ ಹೋಗಿ ಹೇಳ್ತೀನಿ ಅವರ ಮುಂದ.

**ಕಾವೇರಿ:**--(ಅಳುತ್ತ) ಹೇಳಹೋಗ್ತಾಯಿ ನೀ ಬರೀ ಮಾತಾಡ್ತೀದೀ ಅವಾಂ ನಾಕ ಹೊಡ್ದಾನು ಅಷ್ಟೇ!?

**ರಮೆ:**— ಅ-ತ್ರ, - ಮು-ತ್ತು ಸು-ರಿ-ಯೂ-ದಿ-ಲ್ಲ. (ಒಳಗೆ ಹೋಗುವಳು.)

**ಕಾವೇರಿ:**— ದೇವ್ರ ನನ್ನ ಕಂಣ್ಯಾಕ ಮುಚ್ಚುವಲ್ಲೆಪ್ಪಾ ! ಛಡಕ್ನೇ, ಈ ಬಡತನ ಸಂಸಾರ, ಪ್ಯಾಲಿ ಸಸಿ ಮಕ್ಕಳ ಕಡಿಂದ ಹೊಡ್ಸಿ-ಕೊಂಬೋದು.

**ವೆಂಕಣ್ಣ:**— (ಒಳಗೆ ಬಂದು) ಏss ಥೂ-ಥೂ-ಥೂ ಏನರಿಷ್ಟ ತನಾನss ಇದು, ಮರ್ದಮುಂದ ಕೂತು ಅಳ್ತೀ ಯಾಕ?

**ಕಾವೇರಿ:**—ಗಂಡನ್ಕಡಿಂದ ಹೊಡ್ಸತಾಳಂತ್ರೀ, ನಂದೇನದ ಮನ್ಯಾಗ ಕೂಳ್ಬಡಿಲಿಕ್ಕಿದ್ದೀನಿ.

**ವೆಂಕಣ್ಣ:**—........ಕಲ್ಲೊಗದು, ಮೂರಿಗೆ ಸಿಡ್ಸಿಕೊಂಡ್ರಂತ. ಅದರ ಸಂಗ್ತಿ ಮಾತರ ಯಾಕ ಆಡ್ತೀ, ನೀನೇ ಸುಮ್ಕಿದ್ದ ಬಿಡು. ಏಳು ಭಡಕ್ನೆ ಮೈ ತೊಳಕೋ. ಭೀಮಾಚಾರ್ಗೆ ಊಟಕ್ಹೇಳ್ಬಂದೀನಿ,

**ಕಾವೇರಿ:**— ಯಾಕ ? ಇವತ್ತೇನು ?

**ವೆಂಕಣ್ಣ:**— ಆಕಿ ಶ್ರಾದ್ಧಲ್ಲss ಇವತ್ತ, ಇಷ್ಟೊತ್ತನಕಾ ನೆನಪ್ಪೇ ಆಗ್ಲಿಲ್ಲಾ, ಏಳೇಳು, ಭಡಕ್ನೆ ಮೈ ತೊಳಕೋ.

**ಕಾವೇರಿ:**— ಅದೆಲ್ಲಾ ಸರಿss, ಮನೀ ಒಳಗ ಒಂದ ಸಾಮಾನಿಲ್ಲಾ, ಇವೀಸ ಹುಳಕ ಹುರಳೀ ಬ್ಯಾಳಿ, ಒಂದೆರಡಸೇರ್ನಷ್ಟು ಜ್ವಾಳಿರಬೇಕು, ಇನ್ಮ್ಯಾಲಿಷ್ಟು ತಿರಿವಿಕೋಬೇಕಂತ ಮಾಡಿದ್ದೆ, ಬೆಲ್ಲಂತೂ ಹದ್ನೈದ್ದಿವ್ಸಾತೂ ಇಲ್ಲೇ ಇಲ್ಲಾ, ಕಾಳಿಲ್ದೆ ಒಗ್ಗರ್ಣೆ ನಡ್ದೇನಡ್ದದ, ಶ್ರಾದ್ಧಾ ಅಂದ್ಬಳಿಕ ಅಕ್ಕಿ, ತುಪ್ಪಾ, ಸಕ್ರುರೇ ಬ್ಯಾಡ್ss ಅದರಾಗ ಭೀಮಾಚಾರ್ಗೆ ಬ್ಯಾರೆ ಊಟಕ್ಹೇಳೀರಿ,

**ವೆಂಕಣ್ಣ:**— ಎಂಥಾ ವ್ಯಾಳ್ಯಾ ಬಂತಲ್ಲss ನನ್ಗ, ತುಪ್ಪಿದ್ದಿದ್ದಿಲ್ಲೇನ ಮನ್ಯಾಗss.

**ಕಾವೇರಿ:—** ಖೋಲೀಒಳ್ಗ ಒಂದರ್ಪಿ ಒಳ್ಗ ಕಟ್ಟೆ ಸಜ್ಗೀ ಇಟ್ಟಿದ್ದೆ, ಇದ್ದಿದ್ದಿಷ್ಟೂ ತುಪ್ಪಾಹಕ್ಕೊಂಡು, ನಾ ಪುರಾಣ್ಕ ಹೋದಾಗ, ಒಲೀ ಮುಸ್ರೀ ಮಾಡಿ, ಸಜ್ಗೀ ಮಾಡ್ಕೊಂಡು ತಿಂದ್ಬಿಟ್ಟಾರ!!

**ವೆಂಕಣ್ಣ:—** ಶ್ರಾದ್ಧಾತಾಗೂ ಹೊತ್ಬಂತಲ್ಲs. ಆಕ್ಕಿಲ್ಲಾಂತೀದಿ, ಬ್ಯಾಳಿಲ್ಲಾಂತೀದಿ, ಮೊದಲೇ ಅರಿಷ್ಠ ಸೇದೇವ ಮನ್ಯಾಗ, ಶ್ರಾದ್ಧಾ-ಪಕ್ಷಾ, ಬಿಟ್ರೆಂತೂ ತೀ-ರೇ ಹೋತು.

**ಕಾವೇರಿ:—** ಮನ್ಯಾಗೇನವ, ಏನಿಲ್ಲಾ, ವಿಚಾರ್ಮಾಡಿ, ಅಂಥಾ ಬ್ರಾಮ್ಹಣ್ಗ ಹೇಳ್ಬೇಕೋ ಇಲ್ಲೋ, ಲಿಸಿಂಗ್ನೇ ಹೋಗಿ ಹೇಳಿದ್ರ......

**ವೆಂಕಣ್ಣ:—** ಅದೆಲ್ಲಾ ಆತಲ್ಲಾ, ವೆಂಕೂಬಾಯಿ ಮನ್ಯಾಗ, ಕಡಾ-ತಗೊಂಡ್ಬಾ, ನನ್ನ ಕಡ್ದರೂ ಒಂದ ಪೈ ಸಿಗೂದಿಲ್ಲಾ.

**ಕಾವೇರಿ:—**ನಾನರೇ ಏನ್ಮಾಡ್ಲೀ, ನನ್ನ ಕಡದ್ರೂ ಕಡಕ್ಹೋಗೂದಿಲ್ಲಾ, ಉಳ್ಕೀದವರನ್ನಾ ಕೊಡೂದೇ ಇಲ್ಲಾ, ಕೊಟ್ರ ಆದೇ ವಂದ ಕಾಶಿ, ಹಗಲೆಲ್ಲಾ ಹಗಲೆಲ್ಲಾ ಎಷ್ಟು ಸಾರೆ ಹೋಗೂದ ಆಕೀ ಮನೀಗೆ, ಆಕೀ ಗಂಡ್ನೊ ಒಂದಥರಾದರೀ ಸ್ವಭಾವದವಾ, ಗುಂಯಿ ಗುಂಯಿ ಮಾಡ್ಕೋತ ಥಡಕ್ನೇ ಏನಾರೇ ಅಂದಗಿಂದಾನು. ಲಕ್ಷ್ಮಂಬಾಯೀ, ತಾ ಒಯ್ಸ್ಲಕ್ಕಷ್ಟೇ, ಇಸಿಗ್ಗಿ ಮಿಸಿಗ್ಗಿ ಸಾಸ್ವೀ ಅಂತ ಪಯ್ಮಾತಳ, ಮೆಂಥೇ ಅಂತಾಳ, ನನ್ನಾವ್ಯ ಳ್ಯಾಕ್ಕ ಪಾತ್ರ ಒಬ್ರೂ ಆಗೂದಿಲ್ಲಾ.

**ವೆಂಕಣ್ಣ:—** ಹೌದs ಈಗೇನ್ಮಾಡಂತೀ ಹಂಗಾರ, ಬ್ರಾಮ್ಹಣಗ್ಹೇ-ಳ್ಕೊಂಡ ಕೂತೀನಿ, ಆರ್ತಾಸ್ಹೊತ್ತಾಗೇದ........ರಾಘ್ಯಾ ಹೋದ್ನೇನ ಹೊರ್ಗs.

**ಕಾವೇರಿ:—** ಮನ್ಯಾಗನ್ನಾ ಇಲ್ಲೊ್ನೇಡ್ರಿ.

**ವೆಂಕಣ್ಣ:—** ಒಡ್ತನಾ, ಮ್ಯಾಲೆ ಬ್ರಮ್ಹೋತಿ!! ಅವನೇ ಶ್ರಾದ್ಧಾ-ಮಾಡೋಂವ,ಏನ್ಸಿಂದ್ಬರ್ತಾನೋ ಏನೋ? ಅಂಗ್ಡ್ಯಾಗ!! ಕಷ್ಟಾ ಮಾಡ್ಸಿ ಗೊಂಡು ಬಂದ್ರೂ ಬಂದೇ ಬಂದಾ? ಏನ್ನನ್ನ ಸಂಸಾರಾತು.

**ಕಾವೇರಿ:**— ಮೊದಲ ಇಂದಿನ್ವಿಚಾರ ಮಾಡ್ರಿ, ಎಲ್ಲಾ್ಯರೆ ಸಾಲಾತಗೀರಿ.

**ವೆಂಕಣ್ಣ:**— ಸಾಲಾ ಆಸ್ನೂಣಾss ಒತ್ತೀss, ಅಂತಾರss. ಏನ್ಮಣ್ಣದ ಇಡ್ಲಿಕ್ಕೆ, ಜೀವಾ ಒತ್ತೀ ಇಟ್ರ ಸರಿ ಜೀವಾ!!

**ಕಾವೇರಿ:**— ಮೊನ್ನೆ ರಾಯರ ಮನ್ಯಾಗ ಕೊಟ್ಟದ್ದು, ಎರಡ್ನೊಡ್ಡ ಹಂಡೇಇಟ್ಟು, ನಾಲ್ಕಾರ ರೂಪಾಯಿ ತಂಗೊಂಡ್ಬರ್ರಿ. ಇಂದಿನ್ಕೆಲ್ಲಾಸಾಗ್ಲಿ,

**ವೆಂಕಣ್ಣ:**— ( ತಲೆಬಾಗಿಲು ಕಡೆಗೆ ದಿಟ್ಟಿಸಿ ನೋಡಿ, ಆನಂದದ ಕಿರುಕಳೆಯಿಂದ ) ರಾಘ್ಯಾ ಅಲ್ಲೇನವಾ, ಶ್ರಾದ್ಧ ಇದ್ದದ್ದು ಗೊತ್ತದ ಕಾಣಸ್ತದ್ನೋಡು! ಕೈಯ್ಯಾಗ ಏನೇನೋ ಹಿಡ್ದಿಲ್ಲs!!

( ಕೆಲವು ಪುಡಿಕೆಗಳೊಂದಿಗೆ ರಾಘೂನು ಬರುವನು. )

**ವೆಂಕಣ್ಣ:**— ಸಾಮೂನಾ ತಂದೇನೋ ಶ್ರಾದ್ಧಕ್ಕs?

**ರಮೆ:**— ( ಹಸಿದ ಹುಲಿಯಂತೆ ಬಂದು, ಅವನ ಕೈಯ್ಯಲ್ಲಿದ್ದುದನ್ನು ಕಸಿದುಕೊಳ್ಳುತ್ತ) ಹೇಳಿದ್ದೆಲ್ಲಾs ತಂದೀರಿಲ್ಲೊ?

**ರಾಘು:**— ಇಕಾ - ಇದು.... ಚಹಾ ಪುಡಿ,

**ರಮೆ:**— ಸಕ್ರಿ ?.... ಬಿಸ್ಕೀಟು ?

**ರಾಘು:**— ಒಂದೇ ಶೇರು ಸಕ್ರೀ ತಂದೀನಿ. ಇದು ಬಿಸ್ಕೀಟು.

**ರಮೆ:**— ಹೂಂ. ಲೆಖ್ಖಾ ಹೇಳ್ರಿ ಮೊದಲ.

**ರಾಘು:**— (ಸಿಟ್ಟಿನಿಂದ) ಒಳ್ಗ ನಡೀಯss ಹೇಳ್ತೀನಿ.

**ರಮೆ:**— ಮೊದಲ ರೊಕ್ಕಾ ಕೊಡ್ರಿ. ಎಲ್ಲಾs ಗೊತ್ತದ ನನಗ (ಅನ್ನುತ್ತ ಹೋಗುವಳು.)

**ವೆಂಕಣ್ಣ:**— ಅವಾ ಯಾಕ ಸಂಸಾರಕ್ಕ ನೆರವಾದಾನು .... ಮಗ್ಗ ಬುದ್ಧಿ ಬಂತೇನೋ— ಶ್ರಾದ್ಧಕ್ಕ ಸಾಮೂನ್ತಂದಾಂತೀನಿ .... ಚಹಾ ತಂ-ದಾ-ನ-ಚ-ಹಾ- ರಾಘ್ಯಾ ಶ್ರಾದ್ಧೋ ಇಪತ್ತ!!

**ರಾಘು:**— ಯಾರ್ದಪಾ ಮತ್ತ ?

**ವೆಂಕಣ್ಣ:**— ನಂದ ಇದ್ದಾಂಗೇ! ನಿನ್ನಲೀಕುಟ್ಟಾ !! ನಿನ್ನಾ-ಯೊದೋ, ಮನ್ಯಾಗ ಒಂದ್ನಾವಾನಿಲ್ಲಾ, ತಗೊಂಬ್ಬಾರಪಾ ಎಲ್ಲ್ಯಾರೆ.

**ರಾಘು:**— ನನಗ್ಯಾರು ಕೊಡ್ತಾರಪಾ........

**ವೆಂಕಣ್ಣ:**— ಆ ಹೊಲ್ಸ ಪುಡೀ ತರ್ಲೀಕ್ಕೆ ಯಾರು ಕೊಟ್ರು.

**ರಾಘು:**— ಅ-ಕೀ-ನೇ-ಕೊ-ಟ್ಟ-ದ್ಲು.

**ವೆಂಕಣ್ಣ:**— ಅಲ್ಲೇ ಇಸ್ಕೊಂಡು ಇಂದಿನ ಕೆಲ್ಸಾ ಸಾಗ್ಸಪಾ, ನಾಳೆ ಮತ್ತ ಕೊಡೋಣಂತ.

**ರಾಘು:**—ಆದೇನಾಗದ ಮಾತಪಾ, ನೀಏನ, ಹಿಂದಾಗ್ಲೆ ಕೊಡೊಂ-ವಲ್ಲ ಬಿಡೂಂವಲ್ಲಾ.

**ವೆಂಕಣ್ಣ:**—ಇಲ್ಲೋ....ಕೊಡ್ತೀನೋ, ಶ್ರಾದ್ಧ ಘಾತ ಆಗ್ತದೋ....

**ರಾಘು:**— ಆದ್ರ ಖರ್ಚ ಉಳೀತದೇಳ, ನೀನೇ ಹೋಗಿ ಎಲ್ಲ್ಯಾರೆ ತಗೊಂಡ್ಬಾ. ನನಗಂತೂ ಎಲ್ಲ್ಯೂ ಶಿಗೂದಿಲ್ಲಾ.

**ವೆಂಕಣ್ಣ:**— ನಾ ಬಾಜಾರ್ದಾಗ ಅಡ್ಯಾಡು ಹಾಂಗಿಲ್ಲೋ, ನಿನ್ನ ಲಗ್ನದ ಸಾಲಾನೇ ೩೦೦ ರೂಪಾಯಿ ಕೂತದ, ಬಡ್ಡೀ, ಬಾಚಿ, ಎಷ್ಟಾ-ಗೇದೋ ಏನೋ, ದೀಡ ವರ್ಷಾತು !!

**ರಾಘು:**— ಅದೆಲ್ಲಾ ನನ್ಗ ಹಚ್ಚಬ್ಯಾಡಪಾ, ಅವ್ವಾ, ಶೀವ್ರ ಅಡ್ಗೀ ಮಾಡು, ನೈವೇದ್ಯಾ ಪೈವೇದ್ಯಾ ಅಂದ್ರ ಕೇಳಾವಲ್ಲಾ! ಇವತ್ತ, ನಿದ್ದೀ ಮಾಡಿ ಕ್ಲಬ್ಬಿಗ್ಹೋಗ ಬೇಕಾಗೇದ, (ಹೋಗುವನು).

**ವೆಂಕಣ:**— ಭ್ರಷ್ಟ ರಂಡೇಗಂಡಾ, ಶ್ರಾದ್ಧಾ ಸಹಿತ ಬಿಡ್ಲಿಕ್ಕೆ ತಯಾರಾದಾ? ಏs ಏನ್ಮಾಡ್ಲೀ ಇನ್ನ.

**ಕಾವೇರಿ:**—. ಏನ್ಮಾಡಬ್ಯಾಡ್ರಿ, ಇನ್ನಿಷ್ಟ ಇಂಗ್ರೇಜಿ ಕಲಸರಿ, ಮಗ್ಗ ಜಿಗಜ್ಜಿಗದು ಜಿಗಜ್ಜಿಗದು, !!

**ವೆಂಕಣ್ಣ:**— ಏ, ಚಾಷ್ಟೀ ಮಾಡ್ತೀ ಅಲ್ಲss, ಶ್ರಾದ್ಧದ ಸಲುವಾಗಿ ನನ್ನ ಶ್ರಾದ್ಧ ಆಗ್ಲೀ ಅಂಥಾಂಗ ಮಾತಾಡ್ತೀದಿ.

**ಕಾವೇರಿ:**— ಹಾಂಗಾರ ಇದ್ದದ್ದೊಂದು ಹಂಡೇ ಮಾರ್ರಿ, ಇಲ್ಲ s ವತ್ತೀ ಇಡ್ರೀ.

**ವೆಂಕಣ್ಣ:**— ಉಪಾಯ್ನೇ ಇಲ್ಲಾ ತೊಗೊಂಡ್ಬಾ.

(ಕಾವೇರಿಬಾಯಿಯು ಮರವನ್ನು ತೆಗೆದುಕೊಂಡು ಒಳಕ್ಕೆ ಹೋಗುವಳು)

**ವೆಂಕಣ್ಣ:**— ಮಗಾ! ಮಗಾ!! ಇಂಥಾ ಮಕ್ಕಳಿದ್ದ್ರs ಉರ್ಲಹ-ಕ್ಕೊಂಡ ಸಾಯೂದೇ, ಅಳೂ ಮಕ್ಕಳ್ಕೈಯಾಗ, ಒಂಚೂರ ಬೆಲ್ಲಾ ಕೊಟ್ಟೇನಂದ್ರ ಇರೂದಿಲ್ಲಾ, ಇವರ ಚಹಾ,........ಇವರ ಸಕ್ಕ್ರೀ......! (ಕಾವೇರಿಬಾಯಿಯು ಉಸರ್ಗರೆಯುತ್ತ ಹಂಡೆಯನ್ನು ತೆಗೆದುಕೊಂಡು ಬರುವಳು, ರಮೆಯು ಆತುರದಿಂದ ಬರುವಳು. )

**ರಮೆ:**— ಆ ಹಂಡೇ ಎಲ್ಗೆ ಒಯ್ತೀರಿ? ( ಅವಸರದಿಂದ ಒಳಗೆ ಹೋಗುವಳು )

**ಕಾವೇರಿ:**— ಬರೂಮುಂದs ಸಾಮಾನಾ ತಗೊಂಡೇ ಬರ್ರಿ, ಒಂಚೆ-ಕ್ಕೀಚೂರಿಲ್ಲಾ ಮನ್ಯಾಗ, ನನ್ಹಣಕ್ಕ ಹಸೀ ಬಸಿಯೂ ಕಟ್ಗೀ ತರ-ಬ್ಯಾಡ್ರಿ, ( ರಮೆ ರಾಘೂ ಬರುವರು )

**ರಮೆ:**— ಹಂಡೇ ಮಾರ್ಲಿಕ್ಕೆ ಒಯ್ತಾರಂತ,

**ರಾಘು:**— ಶ್ರಾದ್ಧs ಇವತ್ತ.

**ರಮೆ:**— ಹಂಡೇದ ಶ್ರಾದ್ಧ!? ಇದ್ದದ್ದೆಲ್ಲಾ ಮಾರಿ, ತಮ್ಮ ಶ್ರೀಪಾದಕ್ಕಿಟಗೊಂಡ್ರ, ನನ್ಸಂಸಾರಕ್ಕ ಮಣ್ಣ ಹರಿವೇನು?ತಾಯೀ ಶ್ರಾದ್ಧಾಗ್ಲಿಕ್ಕೆಲ್ಲಾ, ಹಂಡೇದ ಶ್ರಾದ್ಧ ಕಾಣ್ಸತದ!! ಸೀಪ್ಪಿಡದು ಜಗ್ಗತೀರೋ, ನಾನೇ ಜಗ್ಗೊಳ್ಳೀ?

(ಕಾವೇರಿಯು ಹಂಡೆಯನ್ನು ಎತ್ತಿ ಗಂಡನ ಹೆಗಲಿಗೆ ಇಡುವಳು. ರಮೆಯು ಜಗ್ಗಿ ನಿಲ್ಲಿಸುವಳು )

**ವೆಂಕಣ್ಣ:**— ಲುಚ್ಚ್ಯಾ ಸೂಳೀಮಗನ! ನಿನ್ಹೋಣ್ತಿ ದೌಲತ, ನೋಡ್ಕೋತ ನಿಂತೀದ್ಯಾ?

**ರಾಘು:**—ಅಪ್ಪಾ!! ನನ್ಗ ಬೈತ ಬರಬ್ಯಾಡ್ನೋಡಿನ್ನ ಅಕೀ ಇದಿರ್ಗೆ.

**ವೆಂಕಣ್ಣ:**— ಸೂ....ಮಗನ, ಪೈ ಪ್ರಾಪ್ತಿಲ್ಲಾ.... ನಾಚಿಗ್ಗೆಟ್ಹೋಣ್ತಿ.

**ರಾಘು:**— ಹಾಂ! ಅಪ್ಪಾ, ಅಕೀಗಬೈಬ್ಯಾಡ್ನೋಡು, ಅಕೀಗೆ ಬೈಲಿಕ್ಕೆ ನಿನ್ಗೆ ಅಧಿಕಾರನೇ ಇಲ್ಲಾ.

**ವೆಂಕಣ್ಣ:**— ಈಮನೀ ಒಳ್ಗ ಇರ್ಲಿಕ್ಕೆ ನಿಮ್ಮಿಬ್ಬರ್ಗೂ ಅಧಿಕಾರಿಲ್ಲ. ನಡ್ರಿಹೊರಗ, ಕೂಳ್ಯಾಸೂ........ಮಕ್ಕಳ್ರು. ನನ್ಸಂಸಾರಾ ಬಿರಗಾಳ-ಗ್ಹೊಡದ್ರಿ ರಾಮಾ—ರಾಮಾ........(ನಿಟ್ಟುಸುರಿಕ್ಕುತ್ತ ಕೆಳಗೆ ಕುಳಿತು ಕೊಳ್ಳುವನು. ರಮೆಯು ಹಂಡೆಯನ್ನು ಕೋಟಡಿಗೆ ಒಯ್ಯುವಳು. ರಾಘು ಗುಣಗುಟ್ಟುತ್ತ ಹೊರಗೆ ಹೋಗುವನು, ಕೂಸು ಅಳಲು ಪ್ರಾರಂಭಿಸಿದ್ದರಿಂದ ಕಾವೇರಿಬಾಯಿಯು ಹೊಡೆಯ ಹತ್ತುವಳು. )

**ಕಾವೇರಿ:**— ಸುಡ್ಲೀ ನಿಂನರೆ ಯಾಕ್ಸಾಯವಲ್ಲೀ, ದೇವ್ರ, ಭಡಕ್ನ ನನ್ನ ಕಣ್ಣಾರ ಮುಚ್ಚು, ಇಲ್ಲs ಈ ಸಂಸಾರ್ದ ಹರಕರೇ ಮುಚ್ಚು,

( ಮೆಲ್ಲನೆ ಪರದೆ ಇಳಿಯುವದು )

---

## ನೋಟ ೨.

ಸ್ಥಳ:— ನಡುಮನೆ.

( ವೆಂಕಣ್ಣಾಚಾರ್ಯರು ದರ್ಭದಿಂದ ಪವಿತ್ರದುಂಗುರವನ್ನು ಕಟ್ಟುತ್ತಿರುವರು. ಬಲಭಾಗಕ್ಕೆ ಥಾಲಿ, ಮನಸ್ಸಿನಲ್ಲಿಯೇ ಮಂತ್ರಪಠಿಸುತ್ತಲಿದ್ದಾರೆ. ಒಂದು ಮೂಲೆಯಲ್ಲಿ ಅಸ್ತವ್ಯಸ್ತವಾಗಿ ಹಾಸಿಗೆ ಬಿದ್ದಿದೆ. ಆಚೆಯ ಮೂಲೆಯಲ್ಲಿ ಗಡಿಗೆಗಳು. )

**ವೆಂಕಣ್ಣ:**— ಯಾಲಕ್ಕಿ ಪುಡಿ ಹಾಕಽ, ಮರ್‍ತೀಮತ್ತ ಽ ಜಗಲೀ ಪ್ಯಾಲದ ನೋಡು. ಚಿತ್ತಒತ್ತಟ್ಟಿಗೆ ಇರ್‍ಲಿ, ಮೊನ್ನೀಹಾಂಗ ಪಾಯ್ಸಕ್ಕ ಒಗ್ಗರ್ಣಿಕೊಟ್ಟೀ. (ನಡುನಡುವೆ ಹೆಂಡತಿಗೆ ಸಲಹೆ ಕೊಡುತ್ತ ಮಂತ್ರ ಪಠಿಸುತ್ತಲಿರುವರು. ಕೆಲ ನಿಮಿಷಗಳ ನಂತರ ತಮ್ಮಣ್ಣನು ಕೈಯಲ್ಲಿ ಥಾಲಿಯನ್ನು ಹಿಡಿದುಕೊಂಡು ಪ್ರವೇಶಿಸುವನು. )

**ವೆಂಕಣ್ಣ:**— ಯಾಕೋ ತಮ್ಮಣ್ಣಾ ನೀಬಂದಿ ಊಟಕ್ಕ !! ಬಾಬಾ, ನಿಮ್ಮಪ್ಪ ಮತ್ತೆಲ್ಲಿ ಬಡಕೊಂಡ್ತು.

**ತಮ್ಮಣ್ಣ:**— ಎಲ್ಲೆ ಬಡಕೊಂಡದೋ ಏನ್ರಿ, ನನಗೇ ಹೋಗಂದಾ....

**ವೆಂಕಣ್ಣ:**— ಆ....ತ....ಬಾ. ವಿಶೇಷ ಅದ ಏನೋ ಹೋಗ್ಯಾನ. ನೆಟ್ಗಾತ ಕೂಡು, ಕರ್ತಾನು ಅಗ್ನಿ ಹೋತ್ರಿ, ಬ್ರಾಮ್ಹಣ್ಣಾ ಅಗ್ನಿ ಹೋತ್ರಿ, ನೆಟ್ಗಾತ ಕೂಡು.

**ತಮ್ಮಣ್ಣ:**— ಶೇದೂ....ದಿಲ್ಲ....ರೀ, ಆಚಾರ, ಸುಮ್ನೀ ಅಂತೀರಪಾ.

**ವೆಂಕಣ್ಣ:**— ಅಲ್ಲೋ ರ-ಂ-ಡೇ-ಗ-ಂ-ಡಾ, ಈ ಜುಲಪಿ ಯಾಕ ಹಂಗಾರ. ಹೇಳ್ಬ್ಯಾಡಾ, ಗೊತ್ತದ ನಿಮ್ದೆಲ್ಲಾ, ಎಡಗೈ ಮುಂದ ಮಾಡೂದ ಬಿಡೂದಿಲ್ಲಾ, ಮ್ಯಾಲೆ ಇವೆಲ್ಲಾ ಹುಚ್ಚುಚ್ಚಾರಾ, ಡೌಲು !! ದೊಡ್ಡ ದೊಡ್ಡ ಮನ್ತನದವ್ರೀ ನೀವೆಲ್ಲಾ, ಆತು, ಅವರ್‍ನ ನರಕದಾಗ ಹಾಕತೀರಿ ಆತು.

**ತಮ್ಮಣ್ಣ:**— ಛಲೋ ಕನೆಕ್ಶೈನ್ನ ಆದರೀ ಆಚಾರ, ನಾವು ಜುಲ್ಪೀ ಬಿಟ್ಟಕೊಡ್ಲೀ ನರಕದಾಗೇ ಬೀಳ್ತಾರೇನ್ರಿ?

**ವೆಂಕಣ್ಣ:**— ನಿಂಭಾಷಾ ತಿಳಿಯೂದಿಲ್ಲಪಾ ನಮಗ, ದೊ-ಡ್ಡ-ವ-ರಾ-ಗೀ-ರಿ.

**ತಮ್ಮಣ್ಣ:**— ನೀವು ಹಿರೇರ್ರಿ, ಬೇ-ಖಾ-ದ್ದ-ನ್ರಿ.

**ವೆಂಕಣ್ಣ:**— ಅನಿಸಿಕೊಂಬೂ ಅವ್ರ ನೀವು, ಆಕಾಲ್ಬೋತೋ........ ನಿಂದಿನ್ನಾ ನೂರ್ಪಾರ್ಲಿಗೆ ಬೇಕ ತಮ್ಮಣ್ಣಾ, ಜುಲ್ಪೀ ಬಿಡ್ಲೀ ಏನ್ಮಣ್ಣೀ ಮಾಡ್ಲೀ, ನಿಮ್ಮಪ್ಪ ಹೇಳ್ದಲ್ಲೆ ಕೂಳ್ಗೆರೇ ಹೋಗ್ತೀ, ನಮ್ಹೊಲ್ಯಾ.... ರಾಘ್ಯಾ, ಸಾಯ್ತೀನಿ ಅಂದ್ರ .... ನಂದೊಂದು ಮಾತ ಕೇಳೂದಿಲ್ಲಪಾ.

**ಕಾವೇರಿ:**— (ಒಳಗಿನಿಂದ) ಹೂಂ, ಸಾಕ ಬಿಡ್ರಿನ್ನ, ಬಂದ ಬಂದವ್ರ ಮುಂದ, ಬಂದ ಬಂದವ್ರ ಮುಂದ ಏನದು, ತಪ್ಪೇಲ್ಗೆ ನೀರುಗ್ಗೇಳ್ರಿನ್ನ.

**ವೆಂಕಣ್ಣ:**—ಆತ ಽ ಆತು, ಚಡ್ತೀ, ತುದಿಗೆ ಗಂಟ್ಹಾಕಿದವನೇ ಎದ್ದೆ, ಎಷ್ಟಭಿಮಾನ್ನೋಡೋ ತಮ್ಮಣ್ಣಾ, ಮಗಾ ಕುತ್ಗೀ ಹಿಚಕಿದರೂ, ಮಂದೀ ಮುಂದ್ಹೇಳ್ಬಾರ್ದು. ತಮ್ಮಣ್ಣಾ, ಬಸ್ಗೀ ಅಂತ್ಹೇಳಪಾ, ಆ ಹೊಲ್ಯಾ! ರಾಘ್ಯಾಗ, ಇವತ್ತರೆ ಇಷ್ಟು ಸಾಬಾಣಾ ಬಡ್ಕೊಬ್ಯಾಡಾ ಅಂತ್ಹೇಳು, (ವೆಂಕಣ್ಣಾಚಾರ್ಯರು ದರ್ಭೆಯನ್ನೆಲ್ಲ ಬಳಿದು ರಾಮಾ-ರಾಮಾ- ಅನ್ನುತ್ತ ಒಳಗೆ ಹೊರಟರು. )

**ತಮ್ಮಣ್ಣ:**— ರಾಘೂ, ರಾಘೂ, ರಮಾಬಾಯ್ರ ರಾಘೂ ಇಲ್ಲೇನ್ರಿ (ರಾಘೂನು ಬರುವನು. )

**ರಾಘು:**— ಏ- ಸೂ........ಮ-ಗ-ನ ನಿನ್ನ ನೈವೇದ್ಯೇನೋ ನಮ್ಮಲ್ಲಿ, ಪವಿತ್ರಾದ್ದಲ್ಲ, ನಮ್ಮ ತಾಯಿ ಹಂಗಾರ.

**ತಮ್ಮಣ್ಣ:**—ಕಂತ ಕಳ್ಸೂದೇನು ಇವತ್ತ, ಒಂದನೇದ್ದೊ ಎರ್ಡನೇದ್ದೊ.

**ರಾಘು:**— ಎರ್ಡನೇ ಮುದ್ದತು ಐಧಾ (ಅವಿಧವಾ) ನೋವಿ ಅಲ್ಲೇನು.

ತಮ್ಮಣ್ಣ:— ಕಂತ ಕಳ್ಸಲಿಕ್ಕೆ ಎಕ್ಸಪೆನ್ಸ ಬೇಕಾಗೂದೇ ಇಲ್ಲಾ, ಎಂಥಾ ಸೋವಿ ಮಾಡ್ಬಿಟ್ಟಾರ ನೋಡು,ನಮ್ಮ ಪೂರ್ವಜರು, ಈ ಜಗ-ತ್ತಿನ ಕೋರ್ಟ್ನಿಂದ ರಿಟಾಯರ ಆದವರ ಹೆಸರ್ಗೊಂಡು, ತಿಲಾ, ದರ್ಭಾ, ಯವಾ, ಸೊಟ್ಟ ಕೈಯ್ಯಿಂದ ಒಂದ ಪಾತ್ರ್ಯಾಗ ಬಿಟ್ರಾತು, ಕಂತ ಮುಟ್ತೀ ಹೋಗಿ.

ರಾಘು:—ಏ, ತಮ್ಯಾ, ಶಗಣಿ ತಿನ್ನೂದು ಇದೇ ಧಂದೇದಿಂದ, ಮತ್ತ ನಿಂದಾ ಮಾಡ್ತೀ, ತಿಂಧ್ಯೊರ ಬೀಳೂತನ್ಕಾರೇ ಸ್ತುತಿ ಮಾಡು.

ತಮ್ಮಣ್ಣಾ:— ರಾಯರ ಮನೀ ಆ....ಗಿದ್ರ, ಸ್ತುತಿಮಾಡ್ತಿದ್ದೆ. ಒಳಗ ಕಾಲಿಟ್ಟಕೂಡ್ಲೇ, "ರಾಯ್ರು, ನಿಮ್ಮನೀ ಇಂದ್ರಭವನಾ, ಅನಬೇಕು, ಊಟಕ್ಕ ಕೂತಕೂಡ್ಲೇ ಆಹಾ - ಹಾ - ಹಾ- ರಾಯ್ರು ಅಡಿಗಿ ಭಾಳ ದಿವ್ಯ್ಯಾಗೇದ, ಪಿತೃಗಳು, ಸ್ವರ್ಗಲೋಕದೊಳಗ, ನರ್ತನ ಮಾಡ್ಲಿಕ್ಹತ್ತ್ಯಾರ" ಇವೆಲ್ಲಾ ನಾಟ್ಕದ ಮಾತು ರಾಯರ ಮನೀ ರಂಗಭೂಮೀಮ್ಯಾಲೆ, ಆಕ್ಟಿಂಗಶೀರ ಮಾಡ್ಲಿಕ್ಕೆ ಸಾಧಸ್ತಾವ, ನಿಮ್ಮಲ್ಲೆ ಶಂಖ ಆಗ್ತಾವೋ.

ರಾಘು:— ಘೋಕ ಹೊಡಶ್ಯಾನೋ ನಿಮ್ಮಪ್ಪಾ, ಅಂದಲ್ಲೇ. ಇತ್ತಿತ್ಲಾಗ, ಪಾರಾಯಣಗ್ಯಾಂಗಬಿಟ್ಟು, ಪುರಾಣಗುಂಪ ಶೇರಿಯಪಾ.

ತಮ್ಮಣ್ಣಾ:— ಈವತ್ತರೇ ಒಂದಿವ್ಸ ನಾಲ್ಗಿ ಪವಿತ್ರ ಇರ್ಲಿ, ಪಾರಾ-ಯಣದ ಹೆಸರು ತಗೋಬ್ಯಾಡ, ನಿಮ್ಮಪ್ಪಾ, ನಾ ಬಂದಕೂಡ್ಲೇ ಶಂಖೋದಕ ಪ್ರೋಕ್ಷಣಮಾಡಿ, ನನ್ನ ಪೂಜಾ ಪ್ರಾರಂಭ ಮಾಡ್ಯಾನ, ನೈವೇದ್ಯದ ಪಾಳೀ ನಿಂದ ಬಂದೀತು, ಏಳೇಳು.

ರಾಘು:— ಇದೆಲ್ಲಾ ಗಿಲಿಟುಸಾಕು, ಪಾರಾಯಣಕ್ಕ ಬರ್ತೀಯೋ ಇಲ್ಲೋ ?

ತಮ್ಮಣ್ಣ:— ಉದ್ಗ್ರಂಥದವಾಲಿ ಹರದಾವಂತಲ್ಲೋ ?

**ರಾಘು:—** ಆರ್ಡರ ಕೊಟ್ಟಬಂದೀನೀ ಈವತ್ತ, ನಾರಾಯಣ ಶರ್ಮಾತಂದಿಟ್ಟರತಾನ. ತಾವು ದಯಮಾಡಿ ತಮ್ಮ ಬಾಕೀವರ್ಗಣಿ ಕೊಟ್ಟು ಸಂಘದ ನಿರ್ಜೀವ ಸಭಾಸದರಾಗ್ರಿ ದಯವಿಟ್ಟು.

**ತಮ್ಮಣ್ಣಾ:—** ಕೊಡ್ತೀನೇಳೋ, ಬಸ್ಗೋ ಭಡಕ್ನೆ ನಿಮ್ಮಅವ್ವಾ ತಿರಗಿ ಹೋದಾಳು.

**ರಾಘು:—** ನೀ ದೇವರ ಮನ್ಯಾಗ ಕೂಡು ಹೆಂಗಾರ.

(ತಮ್ಮಣ್ಣನು ಎದ್ದು ಒಳಕ್ಕೆ ಹೋದನು. ರಾಘೂ ಕನ್ನಡಿ-ಯನ್ನು ಮುಂದೆ ಇಟ್ಟುಕೊಂಡು ಶಿಳ್ಳುಹಾಕುತ್ತ ಬಾಚಿಕೊಳ್ಳ ತೊಡಗಿದನು.)

**ರಮೆ:—** (ಬಂದು ಕೈಮುಗಿಯುತ್ತಾ,) ಪ್ರಸನ್ನ ಆಗ್ರೆಲ್ಲಾ.

**ರಾಘು:—** ಪ್ರಸನ್ನಾ !! ಇದೇನ, ನಾಟ್ಕದ ಮಾತ್ಕದ್ದೀ ಏನು ?

**ರಮೆ:—** ಹೂಂ-ಸಾಕು, ಚಹಾದೊಳಗ ಉಳ್ದರೊಕ್ಕಾ ಕೊಡ್ರಿ, ಸಾಕ ಈ ಗಿಲಿಟು.

**ರಾಘು:—** ಇಲ್ಲs, ಖರ್ಚಾಗ್ಯಾವ, ಹಿಂದಾಗಡೆ ಕೊಡ್ತೀನೇಳು ಬಡ್ಡೀಹಾಕಿ,

**ರಮೆ:—** ಬಡ್ಡೀ ವ್ಯವಹಾರಾ ಮಾಡ್ಲ್ಯಾ ಇನ್ನ !

**ರಾಘು:—** ಆದು, ಕೆಟ್ಟ ಅಂತ ತಿಳಿದೀದೇನು.

**ರಮೆ:—** ನಿಂಮಂಥಾ ಜನ್ರಿಗೆ ಕೊಟ್ರ, ಬಡ್ಡೀ ಗಂಟೂ ಕೂಡೆ.... ಹೂಂ, ಇರ್ಲಿ, ನನ್ನ ರೊಕ್ಕಾಕೊಡ್ರಿ ಮೊದ್ಲ,

**ರಾಘು:—** (ಕೋಪಗೊಂಡು) ಈಗೇನ್ಮಾಡಂತೀದೆ ?

**ರಮೆ:—** ಆಹಾ ಹಾ ಥಾ, ಸಾಕ್ರೀ, ಈ ದರ್ಪಾ, ನಂದುಡ್ಡತಿಂದು ನನ್ನಮ್ಯಾಲೇ ಕಣ್ಕೇಸೀತಾರ ! ತರ್ರಿ ಮೊದ್ಲ.

ರಾಘು:— ಅಲ್ಲ, ನಿನ್ನಲ್ಲಿದ್ದ್ರೇನು, ನನ್ನಲ್ಲಿದ್ದ್ರೇನು

ರಮೆ:— ಹೌದ, ಗೊತ್ತದ ಎಲ್ಲಾ.

(ಹೊರಗೆ ಮಾಲೆಯುವನು ೨ದುಡ್ಡಿಗೊಂದು ಮಾಲಿ ಎಂದು ಕೂಗುವನು)

ರಮೆ:— ಮಾಲೀ ತಗೋಬೇಕು ತಿರ್ರಿ, ಮಾಲೀಯುವಾ ಹೋಗ್ಲಿ-ಕ್ಹತ್ಯಾನ, ನಿಂದ್ರುಪಾ, ನಿಂದ್ರು.

ರಾಘು:— ( ನಗುತ್ತೆ ) ಏ, ರೊಕ್ಕಿಲ್ಲ !

ರಮೆ:— ಈ ದೇಶಾವರಿ ನಗಿ ಸಾ ಕ ಮಾ ಡ್ರಿ ೀ, ನನ್ನ ರೊಕ್ಕಾ-ಏನ್ಮಾಡಿದ್ರಿ.

ರಾಘು:— ನಿನ್ನ ಪುಣ್ಯಾದಿಂದ ಒಂ-ದ-ಪ್ಯಾ-ಕು,

ರಮೆ:— ನನ್ನ ರೊಕ್ಕದ್ಲೇನ ? ಅದ್ಹ್ಯಾಂಗ ತಿಳಿಯೂದಿಲ್ಲ ನಿಮಗ, ಹೆಂಡರ ರೊಕ್ಕದ್ಲೆ ತುಡುಗ ಮಾಡಿ ಮಾಡಿ ಶೇದಬೇಕೂ ಅಂತ ಯಾರ ಹೇಳ್ಯಾರ ನಿಮಗ ! ಹೂಂ, ಈಗ ಮಾಲಿಗೆ ರೊಕ್ಕಾ ಕೊಡ್ರಿ ಮೊದ್ಲ.

ರಾಘು:— ಉರ್ಲಹಾಕು ನಾನರೇ ಏನ್ಮಾಡ್ಲಿ ?

ರಮೆ:— ಸಾಲಾ ತಗೀರಿ ಎಲ್ಲ್ಯಾರೆ, ನನಗೇನ ಹೇಳ್ತೀರಿ.

ರಾಘು:-ಬಾಯಮಾಡಬ್ಯಾಡಾ ಕೇಳಿ ಬರ್ತೀನಿಂದ್ರು, (ಹೋಗುವನು.)

ರಮೆ:— ನಾಚಿಕಿ ಹ್ಯಾಂಗ ಬರೂದಿಲ್ಲ್ಲೋ ಏನೋ ಇವರಿಗೆ. ನನ್ನ ಮನಿಯಿಂದ ತಂದ ರೊಕ್ಕದಮ್ಯಾಲೆ ಇವರ ಚೈನೀ ಸಾಗ ಬೇಕು, ಚೈನೀ.

ರಾಘು:—(ಬರುವನು ವೆಂಕಣ್ಣಾಚಾರ್ಯರು ಅವಸರದಿಂದ ಬಂದು)

ವೆಂಕಣ್ಣ:— ರಾಘಣ್ಣಾ-ಏ ರಾಘಣ್ಣಾ, ಒಂದಣೇ ಆದೆ ಏನಪಾ.

ರಾಘು:— ಇಲ್ಲ ಪಾ.

**ವೆಂಕಣ್ಣ:**— ಪಾಯ್ಸದ ವ್ಯಾಲೆ ಹಾಕಲಿಕ್ಕೆ ಸಕ್ಕ್ರೀನೇ ಇಲ್ಲೋ, ಅಗ್ದೀ ಹರಕತ್ತಾಗೆದೋ. ಕಡೀಕ ಎರ್ಡ್ದುಡ್ಡರೆ.

**ರಾಘು:**— ನನ್ಕಡ್ಡೆ ಇಲ್ಲಪಾ.

**ವೆಂಕಣ್ಣ:**—ಎಲ್ಲಾರೆ ತಂದ್ಕೊಡೋ, ಸಕ್ಕ್ರಿಲ್ದೇ ಹ್ಯಾಂಗೊ?

**ರಾಘು:**— ಸಾಲಾಮಾಡಿ, ಶ್ರಾದ್ಧ ಮಾಡ್ಬೇಕೂ ಅಂತ ಯಾರ ಹೇಳ್ಯಾರಪಾ.

**ವೆಂಕಣ್ಣಾ:**— ಥೂ, ಭ್ರಷ್ಟ ಮುಂಡೇ ಮಗನ, ಬಾಯಿ ಮುಚ್ಚು.
( ವೆಂಕಣ್ಣಾಚಾರ್ಯರು ಸಿಟ್ಟಿನಿಂದ ಹೋಗುವರು. )

**ರಮೆ:**— ಹೂಂ-ಮಾಲೀಯುವಾ ದೂರ ಹೋದಾನು ತರ್ರಿ.

**ರಾಘು:**— ತೊಗೊ, ( ಸುತ್ತಲೂ ನೋಡಿ ಕೈಮುಚ್ಚಿ ರೊಕ್ಕ ಕೊಡುವನು. ಒಳಗಿನಿಂದ ರಾಘು Come-Soon ಕ್ಲಬ್ಬಿನ ವ್ಯಾಳ್ಯಾ ಆತು, ಪ್ರೊಫೆಸರ ಬಂದಾರಂತ, ಹೂಂ, ಹೊರಡು, ಲಗು. )

**ರಾಘು:**— ವ್ಯಾಳ್ಯಾಆತು ಽ, ನಮ್ಮನೀ ಮಂದೀನೆ ಇಂಥಾದಪಾ, ಎಷ್ಟೇಳಿದ್ದೆ, ಇವರ ಶ್ರಾದ್ಧಾ !! ಇವರ ಪಕ್ಷಾ!!

**ವೆಂಕಣ್ಣ:**— ( ಬಂದು ) ಏನಪಾ ಅದು ಅಭರ್ಾಟಾ, ದೇವರಬಂದ್ನೀ ನಮ್ಮೈವ್ಯಾಲೆ, ಏ, ರಾಘ್ಯಾ.

**ರಾಘು:**—ಹದ್ನೆಂಟು ಕೆಲ್ಸ ಇರ್ತಾವ ನಮಗ (ಕೋಟುಹಾಕಿಕೊಂಡು ಹೊರಡುವನು )

**ವೆಂಕಣ್ಣ:**— ಎಲ್ಗೆ ಹೋಗ್ತೀಯೋ, ಏ.

**ರಾಘು:**— ಕ್ಲಬ್ಬಿಗೆ ಹೋಗ್ತೀನಿ, ಕ್ಲಬ್ಬಿಗೆ. ಕೆಲ್ಸ ಅದ,

**ವೆಂಕಣ್ಣ:**— ಶ್ರಾದ್ಧೋ, ರಾಘ್ಯಾ—

**ರಾಘು:**— ಏನ್ಹಚ್ಚೇದೋ, ಏನ್ಹಚ್ಚೇದಿ, ( ಹೋಗುವನು )

**ವೆಂಕಣ್ಣ:**— (ತಲೆಗೆ ಕೈಕೊಟ್ಟು ಕುಳಿತುಕೊಂಡು) ಶ್ರಾದ್ಧಘಾತೋ ಶ್ರಾದ್ಧ ಘಾತಾ, ರಾಮಾ, ರಾಮಾ, ಏನ್ನನ್ನ ಸಂಸಾರ ಆತು. ಇವನ ಮುರಕ ವಿದ್ಯಾ, ನನ್ನ ಹರಕ ಸಂಸಾರ ಜೋಡಾಗೇದ, ರಾಮಾ ರಾಮಾ, ಸಾಕಪ್ಪಾ ಏನ ಜನಾ ಆತಪ್ಪಾ ಇದು-

(ಮೆಲ್ಲನೆ ತೆರೆಬೀಳುವದು.)

---

ಪ್ರಹಸನದಲ್ಲಿಯ ಪಾತ್ರಗಳು ಕೇವಲ ಕಲ್ಪನೆಯುವು.
ಯಾವ ವ್ಯಕ್ತಿಗೂ ಸಂಬಂಧಿಸಿದವಲ್ಲ !

INDIA'S BEST TEA



# AMBER TIPS TEA.

# ಅಂಬರ ಟಿಪ್ಸ್ ಚಹಾ.

**ನೀವು ಅಂಬರ ಟಿಪ್ಸ**
**ಚಹವನ್ನೇ ಕೊಳ್ಳಿರಿ.**

ಯಾಕಂದ್ರೆ ಸರ್ವೋತ್ಕೃಷ್ಟ ಚಹದ ಸಂಗಡಲೇ ಬೆಲೆಯುಳ್ಳ ಇನಾಮುಗಳನ್ನು ಪಡೆಯುವ ಕೂಪನ್ಸಗಳನ್ನು ಸಹ ದೊರಕಿಸಲು ಬರುವದು. ಒಂದು ಪೌಂಡಿನ ಡಬ್ಬಿ ಅಥವಾ ಪಾಕೆಟ್‌ದೊಳಗಿನ ಪ್ರಜೆಂಟ ಕೂಪನ್ಸಗಳನ್ನು ಕೂಡಿಸಿ ಅವುಗಳಲ್ಲಿರುವ ಅಕ್ಷರಗಳ ಸಹಾಯದಿಂದ ಮೇಲೆ ಬರೆದ ಶಬ್ದಗಳನ್ನು ತಯಾರಿಸಿದವರಿಗೆ ಕೆಳಗೆ ವಿವರಿಸಿದ ಇನಾಮುಗಳು ಅವರವರ ಇಚ್ಛೆಯ ಪ್ರಕಾರ ಕೊಡಲ್ಪಡುವದು.

೧ ರೋ. ಗೋ. ರಿಷ್ಟವಾಚ (ಸ್ತ್ರೀಯರ ವ ಪುರುಷರ ಸಲುವಾಗಿ)
೨ ಒಂದು ಜೋಡು ಬೆಳ್ಳಿಯ ಕಪ್ಪು ಬಸಿ.
೩ ಆಗಫಾ ಫೋಲ್ಡಿಂಗ ಕ್ಯಾಮರಾ.
೪ ಪಾರಕರ ವ್ಯಾಕ್ಯುಮ್ಯಾಟಿಕ್ ಫೌಂಟನ್‌ಪೆನ್ (ಮಿಡಿಯಮ್)
೫ ರೇಶ್ಮೆಯ ೯ವಾರಿನ ೧ಪಾತಳ ಶೀರೆ ಅಥವಾ ೫ ವಾರಿನ ೧ಜೋ. ಪಾತಳ ಶೀರೆ.

ಇಂಥ ಉತ್ತಮ ಸಂಧಿಯನ್ನು ಕಳೆದು ಕೊಳ್ಳಬೇಡರಿ. ಈ ಯೋಜನೆಯು ೧೯೩೯ನೇ ಡಿಶೆಂಬರ ೩೧ನೇ ತಾರೀಖಿನ ವರೆಗೆ ಮಾತ್ರ ಇರುವದು.

ಬಾಗಲಕೋಟಿಯ ಏಜಂಟರು:—
**ಜೀವಪ್ಪ ವೇಂಕಪ್ಪ ಬೆಂಗಳೂರ,**
ಬಾಗಲಕೋಟ. (ಮಾರ್ಕೆಟ)

**AMBER TIPS TEA**
**Co. Ltd,**
*Katha Bazar*, BOMBAY.